# SRI RAMA PATTABHISHEKAM

OF

# MAHALAKSHMI

ಮಹಾಲಕ್ಷ್ಮೀ ವಿರಚಿತಂ

# ಶ್ರೀರಾಮ ಪಟ್ಟಾಭಿಷೇಕಂ

EDITED WITH NOTES BY

M. A. RAMANUJA IYENGER.

*Second Edition of No. 15*

*The Karnataka Kavyamanjari Series.*

ಮಹಾಲಕ್ಷ್ಮೀ ವಿರಚಿತಂ

# ಶ್ರೀರಾಮ ಪಟ್ಟಾಭಿಷೇಕಂ

(ವಾರ್ಧಿಕಷಟ್ಪದಿ)

ದ್ವಿತೀಯ ಮುದ್ರಣ

ಮ|| ಆ|| ರಾಮಾನುಜೈಯಂಗಾರ್ಯರಿಂದ
ಪರಿಶೋಧಿತವಾಗಿ,

ಅವರಿಂದ ಬರೆಯಲ್ಪಟ್ಟ ಟೀಕೆಯೊಡನೆ

ಮ|| ಆಜಿ. ನರಸಿಂಹಾಚಾರ್ ಬಿ. ಎ. ಇವರಿಂದ

ಮೈಸೂರು
ವೆಸ್ಲಿಯನ್ ಮಿಷನ್ ಪ್ರೆಸ್ಸಿನಲ್ಲಿ ಮುದ್ರಿತವಾಗಿ ಪ್ರಕಟಿಸಲ್ಪಟ್ಟದೆ.

1924

# ಪೀಠಿಕೆ.

ಈ ಕಾವ್ಯವನ್ನು ರಚಿಸಿದಾಕೆಯ ಹೆಸರು ಮಹಾಲಕ್ಷ್ಮಿ. ಈಕೆಯು ತಾನು "ಚಾವಡಿ ರಂಗಭಟ್ಟನ ಆತ್ಮಜೆ" ಎಂದೂ, ಉಡುಪಿಯು ಸ್ಥಳದವಳೆಂದೂ, "ಕನ್ನಡಿತಿ ಚೆಂಗಳದೇವಿಯು" ಇಷ್ಟಾನುಸಾರ ಇದನ್ನು ಬರೆದಂತೆಯೂ ಗ್ರಂಥಾಂತದಲ್ಲಿ ಹೇಳಿಕೊಂಡಿದ್ದಾಳೆ. ಈಕೆಯು ತಾನು "ಕನ್ನಡಿತಿ"[1] ತನ್ನ ತಂದೆ "ರಂಗಭಟ್ಟ" ಎಂದು ಹೇಳಿಕೊಂಡಿರುವುದರಿಂದಲೂ, ರಾಮನ ಸ್ತುತಿಯನ್ನು ಅದ್ವೈತಮತರೀತ್ಯಾ ಮಾಡಿರುವುದರಿಂದಲೂ, ಸ್ಮಾರ್ತ ಕರ್ಣಾಟಕರಲ್ಲಿ ಹುಟ್ಟಿದ ಬ್ರಾಹ್ಮಣಿತಿಯಾಗಿರಬೇಕು. ಈಕೆಯು ಹರಿಹರರಿಗೆ ಅಭೇದವನ್ನು ಹೇಳುತ್ತಾಳೆ.[2] "ಕನ್ನಡಿತಿಯೊರೆದ ನುಡಿಯೆಂದಿದಂ ಭಾವಿಸದೆ | ಕನ್ನಡಿಗನೊರೆದ ನುಡಿಯೆಂದು ಸಂಭಾವಿಪುದು | ಕನ್ನಡಿಗನೇಕ ಪೆಸರಿರ್ದೊಡೇನಕ್ಕು ಫಲಮೆಸೆವ ಪೊಗಗಾಣ್ಬುದಲ್ತೇ ||"[3]—ಕಾವ್ಯಪಠನದಿಂದುಂಟಾಗಬೇಕಾದ ಫಲವು ಸಿದ್ಧಿಸಿದ ಮೇಲೆ ಹಂಗಸು ಬರೆದರೇನು, ಗಂಡಸು ಬರೆದರೇನು ಎಂದೂ, "ನಿಂದಿಸುವ ಜನರ ದುರ್ವಾಕ್ಯಮಂ ಕೇಳ್ದು ಮನ | ಗುಂದಿ ಮಾಣ್ಬನೆ ಕಾವ್ಯರಚನೆಯಂ ಕವಿ ||"[4] ಎಂದೂ, "ಪೊಂದದತಿವರ್ಣಮೆಸೆದಿರ್ದೊಡಮಲಂಕಾರ | ದಿಂದೆ ಶೋಭಿಸದೊಡಂ ರಾಮನಾಮಾಮೃತದ | ಬಿಂದಿಗೆಯಿದೆನೆ ಬಱಿದೆ ದೂಷಿಸುವ ದೂಷಕಂ ದೋಷಕಂ ಭಾಗಿಯಪ್ಪಂ ||"[4] ಎಂದೂ, "ಬುಧರೊಲ್ದು ಕೈಕೊಳ್ಗೆ ತಿರ್ದುಗೆ ಕೃತಿಯೊ | ಳಧಿಕ ದೋಷಂಗಳೇನಾನುಮುಳ್ಳೊಡೆ ಕಥಾ ಸುಧೆಯನೀಂಟುಗೆ||"[5] ಎಂದೂ, "ಕೊಟ್ಟತುದಿಮರನೊಳಿಹ ಪಣ್ಣಿಗುಱೆ ಬಾಯ್ಬಿಟ್ಟು | ಮುಟ್ಟಿಕೊಯ್ದಪನೆಂಬ ಭ್ರಾಂತಿಯಿಂ ಕೈನಿಳ್ಕಿ | ದಿಟ್ಟಿಸುತ ನೆಗೆಯಲುಜ್ಜುಗಿಪ ವಾಮನನಂತೆ ಕವಿತಾಸುಲಕ್ಷಣಗಳ | ಗುಟ್ಟನಱಿಯದೆ ಕಷ್ಟಸಾಧ್ಯವಹ ಕೃತಿಗೆ ಮನ | ಗೊಟ್ಟಳೆಂದೆನ್ನ ನಗೆಗೀಡುಮಾಡದೆ ಜಗದಿ | ಪುಟ್ಟಿದವರಿಗೆ ಮನದ ಬಯಕೆ|| ಪಿರಿದೆಂದು ಮನ್ನಿಪುದೆಂದು ಸರ್ವಜನರು || "[6]ಎಂದೂ ಹೇಳಿರುವುದನ್ನು ನೋಡಿದರೆ ಕಾವ್ಯರಚನೆಯ ವಿಷಯದಲ್ಲಿ ತನಗಿರುವ ಅಸಾಮರ್ಥ್ಯಶಂಕೆಯನ್ನು

---

[1] ಸಂಧಿ ೨. ೮ ನೆಯ ಪದ್ಯ. [2] ನಾಂದೀಸಂಧಿ ೧, ೩ ; ೫-೬೨.

[3] ಸಂ. ೨. ೮. [4] ಸಂ. ೨. ೬.

[5] ಸಂ. ೨. ೧೦. [6] ಸಂ. ೨. ೪. ಈ ಪದ್ಯಗಳನ್ನು ನೋಡಿ.

ಸೂಚಿಸುತ್ತಾಳೆ, ಇಲ್ಲವೆ ಸ್ವಸಾಮರ್ಥ್ಯದಲ್ಲಿ ನಂಬಿಕೆಯಿದ್ದರೂ ಸಾಮಾರ್ಥ್ಯ ಸಾಲದೆಂಬ ನೈಚ್ಯಾನುಸಂಧಾನವನ್ನು ಮಾಡುತ್ತಾಳೆ. ಈಕೆಗೆ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ವಿಶೇಷ ಪಾಂಡಿತ್ಯವಿತ್ತೆಂಬುದು ಈ ಗ್ರಂಥದಿಂದ ವ್ಯಕ್ತವಾಗುತ್ತದೆ.

ಈಕೆಯು ಸ್ಮರಿಸಿರುವ ಪ್ರಸಿದ್ಧರಾದ ಕರ್ಣಾಟಕ ಕವಿಗಳಲ್ಲಿ ಅಧುನಿಕನಾದ ಷಡಕ್ಷರಿಯು ೧೭ ನೆಯ ಶತಮಾನದವನಾದುದರಿಂದ ಈಕೆಯು ೧೭ ನೆಯ ಶತಮಾನಕ್ಕೆ ಈಚಿನವಳಾಗಿರಬೇಕು. ವಾಸುದೇವ, ಅಚ್ಯುತ, ವೆಂಕಟಕೃಷ್ಣರು ಯಾರೋ ತಿಳಿಯದು. ನಂದಿಯೆಂಬವನು ಕೃಷ್ಣಕರ್ಣಾಮೃತವನ್ನು ಬರೆದ ನಂದೀಶನಾಗಿದ್ದಲ್ಲಿ ಇವಳು ೧೮ ನೆಯ ಶತಮಾನದವಳಾಗಿಯೋ, ನಂದಿಛಂದಸ್ಸನ್ನು ಬರೆದವನಾಗಿದ್ದಲ್ಲಿ ೧೯ ನೆಯ ಶತಮಾನದವಳಾಗಿಯೋ ಇರಬೇಕು. ಆದರೆ ಈ ಕಾವ್ಯದಲ್ಲಿ ಪುಟ್ಟಿತಕೆ, ಬಿರುದನುಂ, ಈರೇಳ್ಗಾಲಂ, ಯುದ್ಧಮಾಡು ಎಂಬರ್ಥದಲ್ಲಿ ಕೈಗೈ ಎಂಬ ಧಾತು, ಇತ್ಯಾದಿ ಹೊಸಗನ್ನಡ ಪ್ರಯೋಗಗಳು ಹೇರಳವಾಗಿ ಇರುವುದರಿಂದ ೧೯ ನೆಯ ಶತಮಾನದ ಉತ್ತರಾರ್ಧದಲ್ಲಿ ಇದ್ದವಳೆಂದು ನಿಶ್ಚಯವಾಗುತ್ತದೆ.

"ಪುರಾಣಮಿತ್ಯೇವ ನ ಸಾಧು ಸರ್ವಂ ನ ಚಾಪಿಕಾವ್ಯಂ ನವಮಿತ್ಯವದ್ಯಂ |
ಸಂತಃ ಪರೀಕ್ಷ್ಯಾನ್ಯತರದ್ಭಜಂತೇಮೂಢಃ ಪರಪ್ರತ್ಯಯನೇಯಬುದ್ಧಿಃ ||"

ಎಂದು ಕಾಳಿದಾಸನು ಹೇಳಿರುವ ರೀತ್ಯಾ ಈ ಕಾವ್ಯವನ್ನು ಪರಿಶೀಲಿಸಿ ನೋಡಿದಲ್ಲಿ ಆಧುನಿಕವಾಗಿದ್ದರೂ ಇದು ಕನ್ನಡದಲ್ಲಿ ಪ್ರಸಿದ್ಧವಾಗಿರುವ ಯಾವ ಷಟ್ಪದಿ ಕಾವ್ಯಗಳಿಗೂ ಯೋಗ್ಯತೆಯಲ್ಲಿ ಕಡಮೆಯಾಗಿಲ್ಲವೆಂದೂ ಸರ್ವಶ್ಲಾಘ್ಯವಾಗಿ ಪರಿಗ್ರಾಹ್ಯವಾಗಿದೆಯೆಂದೂ ಹೇಳಬಹುದು. ಗ್ರಂಥವು ಪ್ರೌಢವಾಗಿಯೂ ನೀತಿಬೋಧಕವಾಗಿಯೂ ಇದೆ. ಇದರಲ್ಲಿ ವರ್ಣನೆಯನ್ನಾಗಲಿ, ಕಥೆಯನ್ನಾಗಲಿ ಬೇಸರಿಕೆ ಹುಟ್ಟುವಂತೆ ಲಂಬಿಸಿಲ್ಲ; ಔಚಿತ್ಯವರಿತು ಎಷ್ಟು ಬೇಕೋ ಅಷ್ಟೇ ಮಾಡಿದೆ. ನಾಂದೀ ಸಂಧಿಯಲ್ಲಿ ಸಂಸ್ಕೃತದಲ್ಲಿ ಶ್ಲೇಷಮೂಲಕವಾಗಿ ವರ್ಣಿಸುವ ಶಕ್ತಿಯು ಪ್ರಕಾಶಿತವಾಗಿದೆ. ಯಮಕವನ್ನು[1] ಬರೆಯುವುದರಲ್ಲಿಯೂ, ಅನುಪ್ರಾಸಗಳನ್ನು[2] ಉಪಯೋಗಿಸುವುದರಲ್ಲಿಯೂ ಕವಿಯ ಶಬ್ದಶಕ್ತಿಯೂ, ಸಂದರ್ಭಾನುಸಾರ ಉತ್ಪ್ರೇಕ್ಷಾದಿಗಳನ್ನು[3] ಮಾಡುವುದರಲ್ಲಿ ಬುದ್ಧಿಶಕ್ತಿಯೂ ಬಹಳವಾಗಿ ಕಂಡಬರುತ್ತದೆ. ಸಮುದ್ರ

---

[1] ಸಂಧಿ ೧-೫, ೭ ; ೨-೧ ; ೩-೨೬, ೨೭, ೩೮ ; ೫-೮೧, ಪದ್ಯಗಳನ್ನು ನೋಡಿ.

[2] ಸಂಧಿ ೪-೯ ; ೧-೪ ಇತ್ಯಾದಿ.

[3] ಸಂಧಿ ೩-೧೪. ೧೬, ೧೯ ; ಸಂಧಿ ೫-೩೪, ೩೬, ೩೭, ೩೮, ೫೫, ಇತ್ಯಾದಿ.

ವರ್ಣನೆಯೂ, ರಾಮ ಲಕ್ಷ್ಮಣ ಭರತ ಸೀತೆ ಕೈಕೆ ಸುಮಿತ್ರೆ ಕೌಸಲ್ಯೆ ಹನುಮಂತ ಇವರುಗಳ ಪರಸ್ಪರ ಸಮಾಗಮಗಳಲ್ಲಿ ಅನುಭಾವಪ್ರಕಾರಗಳ ವರ್ಣನೆಯೂ ಯಾರ ಮನಸ್ಸನ್ನು ತಾನೆ ಅಪಹರಿಸದು. ಈ ವರ್ಣನೆಗಳನ್ನು ಓದಿದರೆ ಈ ಕಾವ್ಯವು ಜೈಮಿನಿಭಾರತ, ಹರಿಶ್ಚಂದ್ರಕಾವ್ಯ ಮುಂತಾದ ಪ್ರಸಿದ್ಧ ಗ್ರಂಥಗಳ ಗುಂಪಿಗೆ ಸೇರುವ ಯೋಗ್ಯತೆಯನ್ನು ಹೊಂದಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಶೈಲಿಯಲ್ಲಿ ಲಾಲಿತ್ಯವು ಎಲ್ಲಿ ನೋಡಿದರೂ ಚೆನ್ನಾಗಿ ಕಂಗೊಳಿಸುತ್ತದೆ. ಅನ್ವಯದಲ್ಲಿ ತಿರಿಚು ಮುರಿಚು ಪ್ರಾಯಶಃ ಇಲ್ಲವೆಂದೇ ಹೇಳಬಹುದು.

ಈಕೆಯು ಇನ್ನಾವ ಗ್ರಂಥಗಳನ್ನು ರಚಿಸಿದ್ದಾಳೋ ಗೊತ್ತಿಲ್ಲ.

ಶ್ರೀರಾಮನು ವಿಭೀಷಣನಿಗೆ ಲಂಕೆಯಲ್ಲಿ ಪಟ್ಟವನ್ನು ಕಟ್ಟಿ, ಪುಷ್ಪಕ ವಿಮಾನದಲ್ಲಿ ಪರಿವಾರದೊಡನೆ ಹೊರಟು, ನಂದಿಗ್ರಾಮದಲ್ಲಿ ಭರತನನ್ನು ಕಂಡು, ಅವನೊಡನೆ ಅಯೋಧ್ಯೆಗೆ ಬಂದು, ಪಟ್ಟಾಭಿಷಿಕ್ತನಾದನು ಎಂಬುದೇ ಈ ಕಾವ್ಯದ ಕಥಾಸಾರ. ಈ ಕಥೆಯನ್ನು ಆದಿಶೇಷನು ವಾತ್ಸ್ಯಾಯನ ಋಷಿಗೆ ವಿವರಿಸಿದ್ದಾಗಿ ಹೇಳಿದೆ.

ಪ್ರಕೃತದಲ್ಲಿ ದೊರೆತಿರುವ ಸ್ತ್ರೀಜನ ವಿರಚಿತವಾದ ಗ್ರಂಥಗಳಲ್ಲಿ ಇದೊಂದು ಉತ್ತಮವಾದ ಗ್ರಂಥ.

ಮೈಸೂರು.
29-7-24

ಮಂ|| ಆ|| ರಾ||

## ಮಹಾಲಕ್ಷ್ಮೀ ವಿರಚಿತಂ

# ಶ್ರೀರಾಮಪಟ್ಟಾಭಿಷೇಕಂ

(ವಾರ್ಧಿಕ ಷಟ್ಪದಿ)

### ನಾಂದೀಸಂಧಿ.

ಶ್ರೀಮದಚಲಾತ್ಮಜಾನನಕೈರವಾಬ್ಜಂ ನಿ ।
ರಾಮಯಂ ದಿವ್ಯಕೇಶಂ ರಾಜಶೇಖರಂ ।
ಸಾಮಗಾನಪ್ರಿಯಂ ಹರಿಸುತಾಹಿತನಹೀನಾಲಂಕೃತಾಂಗಂ ಶಿವಂ ॥
ಕಾಮಮುಖ್ಯಾರಿವರ್ಗಧ್ವಂಸಿ ಭೂತಪತಿ ।
ಭೀಮವಿಕ್ರಮಿ ಪುಣ್ಯಜನವಂದಿತಂ ಸದಾ ।
ರಾಮನೊಲಿದೀಗೆಮಗೆ ಕಾಮಿತಾರ್ಥಂಗಳಂ ಮಂಗಳಂ ಗೋತ್ರೇಶ್ವರಂ ॥೧॥

ರಾಗಮಣಿರುಚಿರಾಜಿತೋತ್ತಮಾಂಗಂ ಸುಪು ।
ನ್ನಾಗಾಬ್ಜಪುಂಡರೀಕಾಕಲಿತಪದನಮಿತ ।
ಭೋಗಯೋಗ್ಯಾಶ್ರಯಂ ಭುವನಗರ್ಭಂ ವಂಶಶೋಭಿತಂ ಹೈಮಕಟಕಂ ॥
ರಾಗರಸಯುತನಮಲಘನರೂಪನಚಲಂ ಸು ।
ರಾಗವೋನ್ಮಿಲಿತಪ್ರದೇಶನನಿಶಂ ನಿರ್ಜ ।
ರಾಗರನೊಡರ್ಚುಗೆಮ್ಮಖಿಳರ ಮನೋಭೀಷ್ಟಮಂ ಕೂರ್ಮೆಯಿಂ ಭೂಧರಂ ॥೨॥

ಮಲವಿನಾಶಂ ಬಾಡಬಾಶ್ರಯಂ ಸತ್ತ್ವಸಂ ।
ಕುಲಯುಕ್ತನಧಿಕಗುಣಗಂಭೀರನನಿಮಿಷಾ ।
ಕಲಿತಾನ್ತರಂಗಂ ಸದಾಹಿಮಕರಾಂಕಲಾವಣ್ಯಪ್ರಭಾವಸ್ಥಿತಂ ॥
ಚಲದಭ್ರಗಂಗಾನ್ವಿತಂ ಸ್ವೈರನಭವನಿ ।
ಸ್ಖಲಿತಶುಭ್ರಾನಂತಮಣಿಶೋಭಿತಂ ಭೂತ ।
ಕುಲಜಾತನಾಥವಾಸಾಸ್ಪದಂ ಮಾಳ್ಕೆಮಗೆ ಶ್ರೇಯಮಂ ಶ್ರೀಶಂಕರಂ ॥೩॥

ಚಂಚಲಾಯತನೇತ್ರೆ ಕಪಿಮುಖಸ್ತುತಿಪಾತ್ರೆ ।
ಪಂಚಮಸುವಾಣಿ ಫಣಿವೇಣಿ ಕಲ್ಯಾಣಿ ದೇ ।
ವಾಂಚಿತಪದಾಬ್ಜಾತೆ ಗೋತ್ರಾತ್ಮಜಾತೆ ವಿಖ್ಯಾತೆ ಲೋಕೈಕಮಾತೆ ॥
ಚಂಚಲಾಲಕಿ ರಾಜವದನೆ ಗುಣಗಣಸದನೆ ।
ಪಂಚಾಸ್ಯಮಧ್ಯೆಯಕ್ಷರವಿದ್ಯೆ ನಿರವದ್ಯೆ ।
ವಾಂಛಿತವನೀ ಮಾನಿನೀ ಮಾಸಿಪಂತೆನ್ನ ಕಬ್ಬವೆಂದುಂ ಧರೆಯೊಳು ॥೪॥

ದ್ರಾವಕಂ ವಿನತಾತ್ಮಬಂಧ್ವಸಚ್ಚರಿತನಿ ।
ರ್ದ್ರಾವಕಂ ನಾಗಾವೃತಾಂಗಂ ದಯಾಸಮು ।
ದ್ರಾವಕರಕಂ ದೀರ್ಘನಾಸಿಕನವೋಘಂ ಸುವರ್ಣಪಕ್ಷಪ್ರಭಾವಂ ॥
ಭಾವರಹಿತಂ ಬುಧಜನೌಘವಂದಿತಪದನ ।
ಭಾವಜನ್ಮಂ ವಿನಾಯಕನೆಮ್ಮಗಾವಗಂ ।
ಭಾವಶುದ್ಧಿಯನಿತ್ತು ಕೃತಿಗೆ ನಿರ್ವಿಘ್ನತೆಯನೆಸಗಿ ತಾನೊಲಿದು ಪೊರೆಗೆ ॥೫॥

ಯತಿಗಣಾಶ್ರಯವೆನಿಸಿ ಶಬ್ದಾರ್ಥಭಾವದಿಂ ।
ದತಿರಸಾಲಂಕಾರವೊಪ್ಪೆ ಜೀವಾಕ್ಷರಸು ।
ಗತಿಗಿರ್ಕೆಯಾಗಿ ನವಪದಪುಂಜರಂಜಿತಮನೋಜ್ಞವೆನೆ ಕೈವಲ್ಯದ ॥
ನುತಸುಕೃತಪದ್ಯಾವಳಿಯೆ ಇದೆನಿಸುತ್ತೆ ವಸು ।
ಮತಿಗೆ ವಿಬುಧರ್ಕಳಿಂ ಸಂಭಾವ್ಯಮಾಗೆ ಭಾ ।
ರತಿಯೊಲಿದಜಸ್ರವೆನಗಿಷ್ಟಾರ್ಥಮಿತ್ತು ತಾನಿರ್ಕೆ ಮಜ್ಜಿಹ್ವಾಗ್ರದಿ ॥೬॥

ನಮುಚಿಸೂದನನಿಂಗೆ ಸಖನಾಗಿ ಪ್ರೇಮದಿಂ ।
ನಮುಚಿಸೂದನಮುಖ್ಯದಿವಿಜರ್ಕಳಂ ಪೊರೆದ ।
ನಮುಚಿತದೆ ಲೋಕೇಶನೆನಿಪ ವಿಧಿಯಂ ಸುಗುಣನಿಧಿಯಂ ಸದಾ ಧ್ಯಾನಿಸಿ ॥
ಕಮಲದೆಲೆಯೊಳ್ ಮಲಗಿ ಪಕ್ಕಿಯನಡರ್ದು ನಿಜ ।
ಕಮಲೆಯೊಡನನುದಿನಂ ಮೆಱೆದಿರ್ಪ ಭಕ್ತಹೃ ।
ತ್ಕಮಲಾಸನಂಗೆ ಭವವಾರಿನಿಧಿತಾರಕಬ್ರಹ್ಮಂಗೆ ಮಣಿವೆನೆಂದುಂ ॥೭॥

ಮಾರಹರನಂಶವೆನಲಂಬಿಕಾತ್ಮಜನಾಗಿ ।
ವಾರಿಧಿಯನುತ್ತರಿಸಿ ಲಂಕೆಯಂ ಪೊಕ್ಕು ಪರ ।
ನಾರಿಯಂ ಬಯಸಿದಸುರನ ಗರ್ವಮಂ ಮುಱಿದು ಕಾಲಾದಿಖಳರ ಮಡುಹಿ ॥

ವೀರಸೇನಾನಿಕರವೆಸೆವ ಪೊಱಲುರಿಪಿ ತಾಂ ।
ಸಾರುತೀಶಂಗೆಱಗಿದರಿಭಯಂಕರತಾರ ।
ಕಾರಿ ಮಿಗೆ ಮಾಳ್ಕಮಗೆ ಶ್ರೀಶೈವಸಂಪದವನನುದಿನಂ ಕೂರ್ಮೆವೆತ್ತು ॥೮॥

ಮಿಗೆ ಮಾಧವಗೆ ಮಿತ್ರನಾದೆ ವೈದೋಱದೀ ।
ಜಗದೊಳೆಲ್ಲೆಲ್ಲಿಯುಂ ಚರಿಸಿ ಭೂಭೃದ್ವರರ ।
ಪಗೆಗೊಂಡು ಸಂಹರಿಸಿ ಶೇಷರಾಜರಿಗಹಿತನಾಗಿ ಜಸವಡೆದೆ ಬಱಿಕ ॥
ಸೊಗಸಿನಿಂ ಪ್ರಮದಾಳಿಗನುಚರನೆನಿಸಿ ಜನರ ।
ಬಗೆಬಗೆಯ ಕಾಮಿತವ ಪೂರೈಸುತಿಹ ಸಮಾ ।
ಶುಗನೆಯೆನ್ನಂ ಪೊರೆಯವೇಳ್ಕೆಂದು ಬೇಡುತಿಹೆ ನೀಂ ಸದಾಗತಿಯಹುದೆಲೈ ॥೯॥

ಇಂತು ಶ್ರೀರಾಮಪಟ್ಟಾಭಿಷೇಕದೊಳ್ ನಾಂದೀಸಂಧಿ ಮುಗಿದುದು.

## ಪೀಠಿಕಾ ಸಂಧಿ

ಹರಿಗೆಱಗಿ ಸೋಮನಂ ನುತಿಸುತ ಮನಂದಣಿಯೆ ।
ಹರಿವಾಹನನ ಬಲಂಗೊಂಡು ಹರಿಪುತ್ರರಂ ।
ಹರಿಸುತಾದ್ಯರ್ಗೆ ತಲೆವಾಗಿ ಗುರುಕವಿಬುಧರ ಪದಕಮಲಮಂ ಧ್ಯಾನಿಸಿ ॥
ಹರಿಗೆಱಗಿ ಸೋಮನಂ ನುತಿಸುತೆ ಮನಂದಣಿಯೆ ।
ಹರಿವಾಹನನ ಬಲಂಗೊಂಡು ಹರಿಪುತ್ರರಂ ।
ಹರಿಸುತಾದ್ಯರ್ಗೆ ತಲೆವಾಗಿ ಗುರುಕವಿಬುಧರ ಪದಕಮಲಮಂ ಧ್ಯಾನಿಪೆಂ ॥೧॥

ಪೆತ್ತಯ್ಯನಯ್ಯನಿಂದನುದಿನದೊಳುಪ್ಪನ್ನ ।
ವಿತ್ತು ಪೊರೆದವನಯ್ಯನಿಂದಾತನಿಂದಮಾ ।
ಪತ್ತಿಗೊದವಿದ ಭಟಂ ಪಿತನನ್ನದಾತನಾಪದ್ಬಾಂಧವಾದ್ಯರಿಂದೆ॥
ಉತ್ತಮೋತ್ತಮನು ಗುರುವಿಂತೆಂಬರೆನಗೆ ಧರೆ ।
ಯತ್ತಣಿಂದೋರೊರ್ವರೊಂದೊಂದನುಪದೇಶಿ ।
ಸುತ್ತ ಬಗೆಬಗೆಯ ಭಾವನೆಯಿತ್ತರನಿಬರೆಲ್ಲರ್ ಗುರುಗಳೆಂದೆಱಗುವೆಂ ॥೨॥

ವ್ಯಾಸ ವಾಲ್ಮೀಕಿ ಜೈಮಿನಿ ಪಿಂಗಳಾಖ್ಯರಂ ।
ಲೇಸಿನಭಿನಮಿಸಿ ಭವಭೂತಿ ಶೂದ್ರಕ ಕಾಳಿ ।
ದಾಸ ಬಾಣಾದಿ ಸಕ್ಕದ ಕಬ್ಬಿಗರ ನೆನೆದು ಕರ್ಣಾಟಕವಿಗಳೆನಿಪ ॥
ಭೂಸುರೋತ್ತಮ ಚಂದ್ರಭಟ್ಟ ಕೇಶವ ನಂದಿ ।
ವಾಸುದೇವಾಚ್ಯುತ ಷಡಕ್ಷರಿ ದಿಗಂಬರವಿ ।
ಲಾಸ ಕವಿರುದ್ರ ವೇಂಕಟ ಕೃಷ್ಣರಭಿಮತವನನುಸರಿಸುತುಸಿರ್ವೆನಿದನು ॥೩॥

ತೊಟ್ಟ ತುದಿಮರನೊಳಿಹ ಪಣ್ಣಿಗುಱಿ ಬಾಯ್ಬಿಟ್ಟು ।
ಮುಟ್ಟಿ ಕೊಯ್ವುಪೆನೆಂಬ ಭ್ರಾಂತಿಯಿಂ ಕೈನಿಳ್ಕಿ ।
ದಿಟ್ಟಿಸುತ ನೆಗೆಯಲುಜ್ಜುಗಿಪ ವಾಮನನಂತೆ ಕವಿತಾಸುಲಕ್ಷಣಗಳ ॥
ಗುಟ್ಟನಱಿಯದೆ ಕಷ್ಟಸಾಧ್ಯವಹ ಕೃತಿಗೆ ಮನ ।
ಗೊಟ್ಟಳೆಂದೆನ್ನ ನಗೆಗೀಡುಮಾಡದೆ ಜಗದಿ ।
ಪುಟ್ಟಿದವರಿಗೆ ಮನದ ಬಯಕೆ ಪಿರಿದೆಂದು ಮನ್ನಿಪುದಿದಂ ಸರ್ವಜನರು ॥೪॥

ಅಂಬಿಗನ ಪಟವಾತನೋದಿದೊಡೆ ಬಟಿಕ ಬಿಯ ।
ದಂ ಬರೆದ ಕಬ್ಬಮಂ ಪಠಿಸಿದೊಡೆ ಬರ್ಕುಮೆ ಕು ।
ಱುಂಬನ ಬಯಲ್ನುಡಿಯನಱಿತೊಡೆ ಸುಪಾಂಡಿತ್ಯಮಿಂತೆನಲ್ಕೆನ್ನ ಕಾವ್ಯಂ ॥
ಇಂಬಾಗದೆಂದುಮಭಿನವಕಾವ್ಯಕರಕೃತಿಗಿ ।
ದೆಂಬುದೇನಾಶ್ಚರ್ಯಮನ್ಯಪ್ರಬಂಧಗಳ ।
ಹಂಬಲಱಿಯೆನು ದೈವಮಲ್ಲದೆನಗಿಲ್ಲ ದಿವ್ಯಜ್ಞಾನಸದ್ಬೋಧಕಂ ॥೫॥

ನಿಂದಿಸುವ ಜನರ ದುರ್ವಾಕ್ಯಮಂ ಕೇಳ್ದು ಮನ ।
ಗುಂದಿ ಮಾಣ್ಬನೆ ಕಾವ್ಯರಚನೆಯಂ ಕವಿ ಗುಮ್ಮ ।
ನಂದುದಿಪ ನೇಸಱಂ ಕಂಡು ದನಿಗುಡಲರ್ಕನೇಂ ಕಿರಣಮಡಗಿಸುವನೇ ॥
ಪ್ರೊಂದದತಿವರ್ಣಮೆಸೆದಿರ್ದೊಡಮಲಂಕಾರ ।
ದಿಂದೆ ಶೋಭಿಸದೊಡಂ ರಾಮನಾಮಾಮೃತದ ।
ಬಿಂದಿಗೆಯಿದೆನೆ ಬಱಿದೆ ದೂಷಿಸುವ ದೂಷಕಂ ದೋಷಕಂ ಭಾಗಿಯಪ್ಪಂ ॥೬॥

ಮೃದುಪದಾನ್ವಿತೆ ಮಂದಗತಿ ಮಂಜುಭಾಷೆ ಭಾ ।
ಸ್ವದಮಲನಸಂಧಿಶೋಭಿತೆ ವರ್ಣಯುಕ್ತೆ ಷ ।
ಟ್ಪದವೇಣಿ ನವರಸಭರಿತೆ ಸಚ್ಚರಿತೆ ಸುನಯನಾತಿಕಠಿನಸ್ವಭಾವೆ ॥

ಚದುರೆ ಕನ್ನಡಜಾಣೆ ಸತ್ಕಳಾಕೋವಿದರ ।
ಹೃದಯಮಂ ತೋಷಿಸುವಳೆನೆ ರಸವಿಹೀನರಿಂ ।
ಗೊದಗುವಳೆ ದೈವಗತಿಯಿಂದೊರ್ವೆ ಲಭಿಸಿದೊಡವೇಂಗೆಯ್ವರಾಗಾಂಪರು ॥೭॥

ಕನ್ನಡಿತಿಯೊರೆದ ನುಡಿಯೆಂದಿದಂ ಭಾವಿಸದೆ ।
ಕನ್ನಡಿಗನೊರೆದ ನುಡಿಯೆಂದು ಸಂಭಾವಿಪುದು ।
ಕನ್ನಡಿಗನೇಕ ಪೆಸರಿರ್ದೊಡೇನಕ್ಕು ಫಲವೆಸೆವ ಮೊಗಗಾಣ್ಬುದಲ್ತೆ ॥
ಚೆನ್ನನೊರ್ವಂ ಮರುಳನಾದೊಡೇಂ ವಿತ್ತಸಂ ।
ಪನ್ನೆ ತಾಂ ಬಂಜೆಯೆನಿಸಿರ್ದೊಡೇಂ ಕನ್ನಡದೊ ।
ಳಿನ್ನ ಕಬ್ಬಂ ಬರೆಯೆವಟ್ಟೊಡೇಂ ಭಕ್ತಿವೈರಾಗ್ಯಸತ್ಕಥೆಗಳೆಸೆಯೆ ॥೮॥

ಮೂಲವಟಿಸದೆ ವೃದ್ಧಿಯನೆ ಬಹುಪದಾರ್ಥಕನು ।
ಕೂಲಮಂ ಗೆಯ್ದು ಋಣಶೇಷಗಳ ಭೇದಿಸುತೆ ।
ಕಾಲಕರ್ಮಗಳ ಬಿಡದನುಸರಿಸಿ ನಿತ್ಯಕರ್ತೃ ಕ್ರಿಯೆ ವಿಭಕ್ತಿಗಳೊಳು ॥
ಮೇಲೆನಿಸಿ ಸತ್ಕೃತಿಯೆಸಗೆ ಮಾನ್ಯನಹನಂತೆ ।
ಪೋಲೆಸೆಯೆ ಮೃದುವಚನಚಯದಿಂದೆ ಸಂತತಂ ।
ಮೇಲದಱೊಳೇಕವಚನಕ್ರಮವ ಪಿಡಿದಿರಲ್ಕವನ ಮತಿ ವಿಸ್ತರಿಪುದು ॥೯॥

ಬಕನ ಗುಣವೊಂದು ಮರ್ಕಟನದೊಂದಜನ ಮೂ ।
ಷಕನ ಲಕ್ಷಣಗಳೊಳಗೊಂದೊಂದು ಮೇಣ್ ಪಿಪೀ ।
ಲಕನ ಶುನಕನ ಮಾನಸೌಕಸನ ಚಿತ್ರಕಾಯನ ಗುಣಗಳೊಳಗದೊಂದು ॥
ಪಿಕನ ಚಿತ್ರಿಕನ ಮರುಳನ ವಿದೂಷಕನ ವ ।
ರ್ತಕನ ಸಲ್ಲಕ್ಷಣಗಳೊಂದೆರಡಱಿಂದೆಸೆಯ ।
ಲಕಳಂಕಕೀರ್ತಿಯಿಂದೊಪ್ಪಿರ್ಪನಾಕವಿಯೆ ಲೋಕಮಿರ್ಪನ್ನೆವರೆಗಂ ॥೧೦॥

ಬುಧರೆಲ್ಲರೊಲ್ದು ಕೈಕೊಳ್ಗೆ ತಿರ್ದುಗೆ ಕೃತಿಯೊ ।
ಳಧಿಕದೋಷಂಗಳೇನಾನುಮುಳ್ಳೊಡೆ ಕಥಾ ।
ಸುಧೆಯನೀಂಟುಗೆ ಭಕ್ತವೃಂದಮಭಿಮಾನಿಗಳ್ ಮನ್ನಿಸುತ್ತಿರ್ಕೆ ನಿಚ್ಚಂ ॥
ಅಧಿನಾಥರೆಂತುಮಾಶ್ರಯಮನಿತ್ತೆಸಗೆ ನವ ।
ಮಧುರರಸಝರಿಯ ರಸಿಕರ್ ಶೋಧಿಸುತ್ತಿರ್ಕೆ ।
ವಿಧುಪುರದ ಲಕ್ಷ್ಮೀಮನೋಹರಂ ಕಬ್ಬಿಗರ ಕುಲಮಂ ಪೊರೆಗೆ ಸಂತತಂ ॥೧೧॥

ಇಂತು ಶ್ರೀರಾಮಪಟ್ಟಾಭಿಷೇಕದೊಳ್ ಪೀಠಿಕಾಸಂಧಿ ಮುಗಿದುದು.

## ಮೂಱನೆಯ ಸಂಧಿ.

ಸೂಚನೆ ॥ ಶೇಷಮಿಲ್ಲನೆ ರಾಮಚಂದ್ರಮನ ಪಟ್ಟದ ವಿ |
ಶೇಷದಿತಿಹಾಸಮಂ ವಾತ್ಸ್ಯಾಯನಂಗಾದಿ |
ಶೇಷನಷ್ಟಾಹಿಕುಲಘೋಷನಪರಿಮಿತಸಂತೋಷದಿಂದೊರೆದನಂದು ॥

ನ್ಯಸ್ತಮಾನಸನಾಗಿ ಸತ್ಕಥಾಕೌತುಕವ |
ವಿಸ್ತರಿಪರಾರೆಂದು ಚಿಂತಿಸುತ ನಡೆದು ನಾ |
ಗಸ್ತೋಮಮಧ್ಯದೊಳು ರಂಜಿಪ ಮಹಾಶೇಷನಂ ಕಂಡು ದೈನ್ಯಮೆಸೆಯೆ ॥
ಮಸ್ತಕವನಿೞುಹಿ ಬೆಸಗೊಂಡನಾತನೊಳಾದಿ |
ವಸ್ತು ರಘುವರನ ಮೂರ್ಧಾಭಿಷೇಚನಸ |
ಮಸ್ತಚಾರಿತ್ರಮಂ ಪೇೞ್ದು ತನ್ನಂ ಪೊರೆಯಬೇಕೆಂದು ವಾತ್ಸ್ಯಾಯನಂ ॥೧

ಪೊತ್ತು ಭೂತಳಮಂ ಪರೋಪಕಾರಾರ್ಥದಿಂ |
ದಿತ್ತೆ ವಿಷ್ಣುವಿಗೊಡಲ ತಲ್ಪಮೆನೆ ಧರ್ಮಕೆಲೆ |
ಸುತ್ತಿಕೊಂಡೈ ಮಂದರಾದ್ರಿಯಂ ಪ್ರಗ್ರಹದೊಲಮರರೇಸಿತ್ತರೆನಗೆ ॥
ಚಿತ್ತಶುದ್ಧಿಯ ಗೆಯ್ದು ರಾಮಚಾರಿತ್ರಮಂ |
ಬಿತ್ತರಿಸಿ ಪೊರೆದೊಡಾಗದೆ ಪೇೞೆನಲ್ಕೆ ಬೞಿ |
ಕುತ್ತಮಾಂಗವನೆತ್ತಿ ಕುಳ್ಳಿರಿಸಿ ಮೆಯ್ದಡವಿ ನಾಗೇಂದ್ರನಿಂತೆಂದನು ॥೨

ಉಪಚಾರಮೇಕೆಮಗೆ ವಾತ್ಸ್ಯಾಯನನೆ ಕಥೆಯ |
ನುಪದೇಶಗೆಯ್ವೊಡದು ಸುಕೃತಮಂತಲ್ಲದಿದ |
ನುಪಕಾರಮೆಂದು ಬಗೆಯಲ್ಬಹುದೆ ನಿನಗನುಭವಂ ತನಗೆ ತೋಷಮಹುದು ॥
ಉಪಲಬ್ಧಮಕ್ಕು ಸುಜ್ಞಾನಗಿರಿಶಿಖರಮಿ |
ನ್ನುಪಜೀವನಂ ತಾಪಸೌಘಕೆನೆ ಶಂಕೆಯಿಂ |
ಬುಪರಾಗಮಂ ಕಳೆದು ಚಿದ್ಭಾನುಕಿರಣಮಂ ಪ್ರಸರಿಪುದು ರಾಮಚರಿತಂ ॥೩

ಕಡೆಯೆ ಪಾಲ್ಗಡಲನಮೃತಂ ಪುಟ್ಟುವಂತೆ ತೇ |
ದೊಡೆ ಚಂದನಂ ಸುಗಂಧಮನೀವ ತೆಱದೆ ಪುಟ |
ಕಿಡೆ ಕಾಂಚನಂ ಕಾಂತಿ ಪೆರ್ಚುವೊಲ್ ಕರ್ಬುಗೋಲಂ ಪಿೞಿದು ಕಾಸಲೊಡನೆ

ಗುಡವೊನಿಸುತಧಿಕಮಧುರಂಗುಡುವ ಪರಿಯೊಳೆಡೆ |
ಬಿಡದೆ ಶ್ರೀರಾಮಚರಿತಾಮೃತವ ಮಥಿಸಲ್ಕೆ |
ಪಡೆವೆವೆಲೆ ಸುಜ್ಞಾನಪಿಂಡಮಂ ಖಂಡಮಂ ಸವಿಯಲೆನಿತಿನಿದೊ ಬಟಿಕ ||೯||

ಆಲಸ್ಯಮಿಲ್ಲಮೆನಗುತ್ಸವಂ ಪೊಱತು ಶ್ರೀ |
ಲೋಲನಭ್ಯುದಯಚಾರಿತ್ರಮಂ ವರ್ಣಿಸಲ್ |
ಸಾಲದೀನಾಲಗೆಗಳೆಂಬುದೊಂದೇ ಚಂಚಲಂ ಮನದೊಳಲ್ಲದಿನ್ನು ||
ಆಲಿಸಾದೊಡೆ ಸಾಧ್ಯಮಪ್ಪನಿತು ಪೇಳ್ವೆ ನರ |
ಲೀಲೆಯಿಂ ಖಳರ ಸ್ಮೈಮಿನಿಗಟ್ಟಿ ವಿಧಿ ದೇವ |
ಪಾಲಾದಿಸುರರ ರಕ್ಷಿಸಿದ ಗಡ ! ಹರಿಗೆನಿತು ಕರುಣವೋ ತನ್ನವರೊಳು ||೧೦||

ರಾವಣಾದ್ಯರ್ ಮಡಿಯೆ ಪೌರಜನಮೆಯ್ದೆ ಸಂ |
ಭಾವಿಸಲ್ ಶರಣಂಗೆ ರಾಜ್ಯಪದಮಂ ಶಶಿವಿ |
ಭಾವಸುಗಳಿರ್ಪನಕ ನೆಲೆಗೊಳಿಸಿ ಪಟ್ಟಾಭಿಷೇಕಮಂ ವಿರಚಿಸಿದನು ||
ದೇವದುಂದುಭಿ ವೊಱಗೆ ಸೋಗೆಗಣ್ಣಬಲೆಯರ್ |
ಭಾವದಿಂ ನಲಿಯೆ ಪೂಮಳೆಗಱೆಯೆ ಬಟಿಕ ಸು |
ಗ್ರೀವಜಾಂಬವಮುಖ್ಯರುಲಿದರೆಣೆಗಾಣಿವೀರಾಘವನ ವಚನಕೆಂದು ||೧೧||

ಶಶಿಧರಾನನೆಯನಂಗೀಕರಿಸುತೊಡನೆ ಕುಲಿ |
ಶಶರೀರನಂ ಮುಂತೆ ಪುರಕಟ್ಟಿ ವಾನರೇ |
ಶ ಶತಬಲಿ ನೀಲ ನಳ ಜಾಂಬವ ಸುಷೇಣ ಮುಖ್ಯರ್ ಕೂಡಿ ಸಾಲ್ಗೊಂಡಿರೆ ||
ದಶರಥಾತ್ಮಜನರಸಿಯೊಡನೆ ಪುಷ್ಪಕಮಂ ತ್ರಿ |
ದಶರ ನುತಿಗೊಂಡೇಱೆ ಮಣಿರಥದ ಮೌಕ್ತಿಕಮ |
ದಶನಿಯೊಳಶನಿಗೋಪದೊಳ್ಮಸಗೆ ರಂಜಿಸಿತು ನಾಯಕರ ಮಕುಟಂಗಳ||೧೨||

ಭಾನುರಥಮಲ್ಲಮೆಣೆಗಾಲಿ ತೋರ್ಕುಂ ಚಿತ್ರ |
ಭಾನುರಥಮಲ್ಲ ಶುಕ್ಲಧ್ವಜಂ ಕಾಣ್ಗುಮತಿ |
ಭಾನುವಿಂ ಬೆಳಗುತಿಹುದೆತ್ತಣದೊ ಪುಷ್ಪಕಂ ಚೋದ್ಯಮಿದು ನೋಟಕರ್ಗೆ ||
ಮಾನಕಸದಳಮೆನಲ್ ಪೊಱಮಟ್ಟು ಬಟಿಕ ಪವ |
ಮಾನಗತಿಯಿಂ ಮುಂದೆ ಶಕ್ರವಿಧಿಮುಖ್ಯರ ವಿ |
ಮಾನಂಗಳೊಡನೆ ಬರಲಿತ್ತ ತೆಂಗಡಲಧಿಕಘೋಷದಿಂ ಕಣ್ಗೊಳಿಸಿತು ||೧೩||

ಏನಿದಚ್ಚರಿ! ಬೇಡಿದರ್ಗೆ ಕರಿತುರಗಭೂ |
ಧೇನುನವರತ್ನಕನ್ಯಾಕಲ್ಪಭೂರುಹನ |
ವೀನಪೀಯೂಷವಸ್ತ್ರಾಭರಣಗೇಹನಿಜದೇಹಂಗಳಂ ಮಾಣದೆ ||
ದಾನಮಿತ್ತಾದುದೇನಿರ್ಪುದೆಮಗೀಯಲೆಂ |
ದಾನೀರದಂಗಳಬ್ಧಿಯನಳ್ಕಿ ಬೇಡಿದೊಡೆ |
ತಾನಂಜಿದನೆ ಜೀವನಂಗೊಟ್ಟನೆನೆ ಚಿತ್ರಮಲ್ತೆ ಧಾರ್ಮಿಕರ ಚರಿತಂ ||೨೩||

ಸುರರ್ಗಮೃತಂ ಬೇಕೆ, ಮನಮುಂಟೆ ಕಾಲಕಂ |
ಧರಗೆ ವಿಷದೊಳ್, ಬಾಲಚಂದ್ರಂಗೆ ಪಯಮಿಹುದೆ, |
ಶರಮುಂಟೆ ವೀರರ್ಗೆ, ಕೀಲಾಲಮಸುರರ್ಗೆ ದೊರೆತುದೇ, ಲಾವಣ್ಯಮಂ ||
ಸ್ಮರನಿಚ್ಛಿಪನೆ, ಕುಶಮನಱಸುವರೆ ಯಮಿಗಳ್, ಫು !
ನರಸಮಂ ಕೊಂಡರೆ ರಸಜ್ಞರುಂಟಿನ್ನುಮಾ |
ದರದೆ ತಾನೀವೆನೆಂದೋರೆವಂತೆ ಪೊಱೆವಂ ತೆಱತೆಱದಿಂದಬ್ಧಿರಾಜಂ ||೨೪||

ಪೆರ್ಚಿದುರ್ದದಧಿಕತರಸತ್ವದಿಂ ಸತ್ವದಿಂ |
ದುರ್ಚಿ ಮೆಯ್ಗರೆವ ರಾಜೀವಮಾಜೀವಮಂ |
ಕರ್ಚಿ ಪಾಯ್ದಡಗುವ ತರಂಗದಿಂ ರಂಗದಿಂದೆಟ್ದು ಪೆರ್ಮೀನಿನಿಂದ ||
ಸಾರ್ಚಿ ಮುಂ ಸುೞಿವ ಜಲವಾಜಿಯಿಂ ವಾಜಿಯಿಂ |
ದಿರ್ಚಿಡಿದ ವಿದ್ರುಮವಿತಾನದಿಂ ತಾನದಿಂ |
ಬೆರ್ಚಿ ಪರೆದೋಡುವಾನೆಗಳಿಂದ ನೆಗೞಿಂದ ನೆಗೞಿಂದಲಾಸಮುದ್ರಂ ||೨೫||

ಪಟ್ಟುೞಿದು ಸಂಚರಿಪ ಬಾಳೆಯುಂ ಬಾಳೆಯುಂ |
ಮುಟ್ಟವಿಸಿ ನಡೆತರ್ಪ ನಕ್ರಮಂ ನಕ್ರಮಂ |
ಮೆಟ್ಟಿ ಬಹ ಶಕುಲಮಂ ಶಕುಲಮಂ ಬೆಂಬತ್ತಿ ಪರೆವವರಮೀನ ಮೀನಂ ||
ಬಿಟ್ಟಡಂಗುವ ಜಲಗ್ರಾಹಮಂ ಗ್ರಾಹಮಂ |
ದೀಟ್ಟಿಸುತೆ ಪಿಂಜರಿವ ಕಮಠಮಂ ಕಮಠಮಂ |
ಕಟ್ಟೈಸಕದಿಂ ಪಾರ್ವುಲೂಪಿಯನುಲೂಪಿಯುಂ ಬಣ್ಣಿಸಲ್ ನೆಱೆವರಾರ್ಕೈ ||೨೬|

ಭವನಂತೆ ಗಿರಿಸುತಾನ್ವಿತನೆಂದೆನಿಸಿ ಮನೋ |
ಭವನಂತೆ ಮಕರಕೇತನನಾಗಿ ಕಮಲಸಂ |
ಭವನಂತೆವೋಲ್ ಸರಸ್ವತಿಯರಸನೆಂಬ ಪೆಸರಂ ಪಡೆದು ಲೋಕಮಱಿಯೆ ||

ಭವನಲ್ಲ ಮೇಣ್ ಮೆಯ್ಯೊಳೊಪ್ಪಿರ್ದುಮಾತ್ಮಸಂ।
ಭವನಲ್ಲ ಲಾವಣ್ಯಲೀಲೆಯಿಂದೆಸೆದಬ್ಜ।
ಭವನಲ್ಲ ಸಕಲಭುವನಾಶ್ರಯಂ ತಾನೆನಿಸುತರ್ಣವಂ ಕಣ್ಗೊಳಿಪುದು ॥೨೭॥

ಅಡಿಗಡಿಗೆ ಬರ್ಪ ಬಲ್ತೆರೆಗಳೇ ರೋಗಂಗ।
ಳೊಡನೆಬ್ಬಿ ಕಲ್ಲೋಲಮಾಲೆಯೆ ಬೆದರ್ಕೆ, ಸಂ।
ಗಡಿಸಿರ್ಪ ಸುಟಿಗಳೇ ರಾಗಂಗಳೇಱುಟಿಯೆ ಪಿರಿತನಂ ಬಡತನ ವಲಂ॥
ಬಡಬಾನಲಂ ಚಿಂತೆ, ದುಃಖಮೆ ಪೊನಲ್, ಬಾಷ್ಕ।
ಗಡ! ಗುಳ್ಳೆಬೆಳ್ನೊರೆಯೆ, ಸಂತಸಂ ಸುಖಮೆ ಮೇಲ್।
ಸಿಡಿವ ಸೀರ್ಪನಿಯೆನಲ್ ಶರಧಿ ಭವಶರಧಿಯಂ ಪೋಲ್ತೆಸೆದುದಚ್ಚರಿಯೆನೆ ॥೨೮॥

ಮಕರಕರ್ಕಟಕಹರಿಮಿಥುನದಿಂದನಿಮೇಷ।
ನಿಕರದಿಂ ದ್ರೋಣಂ ತಿಮೀನಂಗಳಿಂದೊಪ್ಪು।
ತ ಕಳಂಕಮೆನೆ ಧನುಷ್ಕೋಟಿಯಿಂ ಬೆರೆದತುಳವೃಷಕೆ ನೆಲೆವನೆಯಿದೆನಿಸಿ॥
ಪ್ರಕಟದಿಂ ಕುಂಭಜನ್ಮಾಪೋಶನಕೆ ಸಂದು।
ಸಕಳಸೌಭಾಗ್ಯಸಹ ಕನ್ಯೆಯಂ ಪಡೆದಿತ್ತು।
ಸುಕರಮೆನೆ ರಂಜಿಸಿತು ವಾರಾಶಿ ರಾಶಿರಾಶಿಯನಾಂತ ಗಗನದಂತೆ ॥೨೯॥

ತನುವಿಗತಿಹಿತಮಾಗೆ, ಪೆಱತೊಂದು ಬಗೆಯಿಂ ರ।
ಸನಕೆ ಸವಿದೋಱೆ, ದುರ್ಗಂಧಮಂ ಪವಮಾನ।
ನಿನಗಲ್ಚಿ ನಾಸಿಕಕೆ ಸೋಂಪೀಯೆ, ಕಣ್ಗೆ ತಾನಧಿಕಗಂಭೀರಮಾಗೆ॥
ಘನಘೋಷಮಿಂಪೀಯೆ ಕಿವಿಗೆ, ಸಂತಸಮಾಗ।
ಮನಕೆ ಮಿಂದುಂಡು ಕಾಣ್ಬರ್ಗನಲ್ಪಾರ್ಣವಂ।
ತನತನಗೆ ಮೊಱೆದೇೞ್ವ ಭಂಗಸಂಗದೊಳೊಪ್ಪಿ ರಂಜಿಸುತ್ತಿರ್ಪುದೆಂಮುಂ ॥೩೦॥

ಸಾರದತ್ಯಧಿಕಗಂಭೀರದನಿಮೇಷಸಂ।
ಚಾರದವನೀಧರಾಧಾರದ ಸುರನ್ನ ಭಂ।
ಡಾರದ ತರಂಗವಿಸ್ತಾರದೊಡನೆಸೆವಕೂಪಾರದ ಬೆಡಗನೀಕ್ಷಿಸಿ॥
ವೀರಮರ್ಕಟಕಟಕನಾಯಕರ್ ಸಹಿತ ಸೀ।
ತಾರಾಮನಕ್ಕಜಂಗೊಂಡೊರೆದನಪ್ಪಿ ಮೈ।
ಸಾರಿ ನಗೆಬೀಱಿ ಕರೆಮೀಱಿ ಬಹ ವಾರಿಧಿಯ ತೋಱಿ ನಿಜನಾರಿಯೊಡನೆ ॥೩೧॥

ಕಂಬುಕಂಧರೆ ಶಂಖನಿರವ ನೋಡಲೆ ಚಂದ್ರ ।
ಬಿಂಬಮುಖಿ ಕಾಣ ಚಂದ್ರಮನತ್ತಣಿಂದುಬ್ಬು ।
ವಂಬುನಿಧಿಯಂ ನೋಡು ಮತ್ಸ್ಯಗಳ ಮೀನಾಕ್ಷಿ ಪುಳಿನಮಂ ಪುಳಿನಜಘನೆ ॥
ತುಂಬಿಹುದು ಮಣಿ ಶುಕ್ತಿ ಮೌಕ್ತಿಕಸುರದನೆ ಮಱಿ ।
ಗಿಂಬಾದ ಪರ್ವತಂ ಪರ್ವತಸ್ತನೆ ನೋಡಿ ।
ದಂ ಬಟಿಕ ಕುಂಭಿಯಂ ಗಜಗಮನೆ ತೋರ್ಕುರ್ಜ ಚೆಂಬವಳಂ ಪ್ರವಾಳಾಧರೆ ॥೩೨॥

ದೂಷಣನ ದುರ್ಮಾರ್ಗದಂತೆ ದಶಕಂಧರನ ।
ರೋಷದಂತತುಲಿತಪ್ರತಾಪದಂತಿಂದ್ರವಿ ।
ದ್ವೇಷಕನ ಕುಂಭಕರ್ಣನ ಮುನಿಸಿನಂತೆ ಮಹಿರಾವಣನ ಕಪಟದಂತೆ ॥
ದೋಷದಂತಖಿಳದಿತಿಸಂಭವರ ಪುಣ್ಯದ ವಿ ।
ಶೇಷದಂತತಿಕಾಯನುಗ್ರದಂತುಗ್ರನ ವಿ ।
ಭೀಷಣನ ಭಕ್ತಿಯಂತಡಿಗಡಿಗೆ ತೋರ್ಪ ಪೆರ್ದೆರೆಗಳಂ ನೋಡೆಂದನು ॥೩೩॥

ವತ್ಸ ಕೇಳಿಂತೆಸೆವಕೂಪಾರಮಂ ಭಕ್ತ ।
ವತ್ಸಲಂ ವಿಬುಧೇಂದ್ರಮಣಿಮಕುಟಘಟಿತಭಾ ।
ಸ್ವತ್ಸದಮಲಪದಪದ್ಮಂ ಸುಗುಣಸದ್ಮಂ ಸರೋಜಾಕ್ಷಿಗೊಲ್ದು ತೋಱಿ ॥
ತತ್ಸಮಯದೊಳ್ ರಾಜರಾಜನ ವಿಮಾನಂ ಚ ।
ಲತ್ಸಮುದ್ರವನುಟಿದು ಪೊಱಟುತ್ತರಕೆ ವಿರಾ ।
ಜತ್ಸರಸಿವದನದೀವಿಪಿನಗಳ ಸಾರ್ದುರ್ಜ ಬರೆ ರಾಘವಂ ರಮಣಿಗೆಂದಂ ॥೩೪॥

ಅತಿತನೂರುಹಬಲಂ ಬಲವೈರಿನುತನೆಮ್ಮ ।
ಪಿತಗೆ ಮಿತ್ರಂ ಮಿತ್ರಸೂತಸುತನೂದ್ಭವಂ ।
ಚತುರಂ ವಿಹಂಗರಾಜಂ ರಾಜರಾಜಸಖಸದ್ಭಕ್ತನಪ್ರತಿಮನು ॥
ದಿತಿಜಗರ್ವಾಪಹಾರಂ ಹಾರಕಂಧರೆ ವಿ ।
ಗತದುರಿತಸಂಪಾತಿ ಸಂಪತ್ಸುಖಾಶ್ರಯುವಿ ।
ತತವಿಪಿನಮಿದು ನೋಡು ನೋಡಿತ್ತಲಿತ್ತಲಂಬುಜದಳಾಯತಲೋಚನೆ ॥೩೫॥

ಮುಂದೆ ತೋರ್ಪುದೆ ಕೊಳಂ ಮಯನಿರ್ಮಿತಂ ಮಡದಿ ।
ಪಿಂದೆ ನಿನ್ನಂ ಪುಡುಕ ಬರೆ ತೊಡಕಿ ಬಿಲಸಾರ್ದು ।
ಸಂದೆಗಂಬಡೆ ಸೌರಿಪುತ್ರಿಮಂದಿರಕ್ಕೈದಿ ಮೂವಗಲ್ ಕಪಿಗಳುಟಿದು ॥

ಬಂದೆನುತ್ತುಸಿರೆತ್ತು ವನ್ನೆಗಂ ಪುಷ್ಪಕಂ |
ಸಂದೆಡೆಯ ಕಿಷ್ಕಿಂಧಮಮಂ ಕಾಣ್ ತೋಱು ಸತಿ |
ಗಂದೆಮ್ಮ ಬೞಿವಿಡಿದ ಕೀಶಬಲನಾಯಕಂ ಸುಗ್ರೀವನೆಡೆಯಿದೆಂದಂ ||೩೬||

ಆದೊಡೀತಂಗೊರ್ವನಣ್ಣನುಂಟಿವರೊಳ್ ವಿ |
ವಾದಮಿರೆ ಪೆಣ್ಣಿಂ ಸಹೋದರಂ ಗೆಲ್ದಟ್ಟಿ |
ಲಾದುಗುಡಮಂ ತನ್ನ ಮಡದಿಯಪಹರಣಮಂ ದೂಱಲ್ಕೆ ಬೞಿಕೆನ್ನೊಳು ||
ಕಾದಿ ರಣದೊಳ್ ವೈರಿಯುಂ ಮಡುಹುತೆಮ್ಮವಂ |
ಗಾದರಿಸಿದೆಂ ಸಹಾಯಕನಾಗುತೆಮಗೆ ಸಂ |
ಮೋದಮಪ್ಪಂತೆ ಪ್ರತ್ಯುಪಕರಿಸಿದಂ ಮೇಣೆನಲ್ಕವರ್ ನೆರೆಸಾರ್ದರು ||೩೭||

ತಾರಾ ರುಮಾದಿ ನಾರಿಯರಂದು ಬಿಸುಟ ಮಣಿ |
ಹಾರಾದಿದಿವ್ಯಭೂಷಣಗಳಂ ಬೞಿಕ ಸೀ |
ತಾರತ್ನ ಕೊಳ್ಳೆಂದು ಮಣಿದಿತ್ತೊಡವರ ಮನ್ನಿಸಿ ಕೊಂಡಳವನಿಜಾತೆ ||
ಶ್ರೀರಾಮನಂ ಬೞಿಕ ಸುಗ್ರೀವನಾತಿಥ್ಯ |
ವಾರ್ಕೈದು ಪೋಗೆಂದು ಬೇಡಿದೊಡೆ ದಶರಥಕು |
ಮಾರಂ ಕುಮಾರಂ ಕುಮಾರಂ ಕುಶಲದೆ ಸಂತಯಿಸೆ ಪೊಱಟುದು ಪುಷ್ಪಕಂ ||

ಮುಂದೆ ಮುಂದೈಶರಲ್ಕತಿಜವದಿ ಪವನನಂ |
ಪಿಂದುಱುಹಿ ಕೆಱೆ ತೊಱೆಗಳಂ ಕಳೆದು ರಥಮರಸಿ |
ಗಂದು ರಕ್ಕಸಪಕ್ಕಿಗಳ ಪೊಣರ್ಕೆಯ ವಿಪಿನಮಂ ತೋಱೆ ಸುಟ್ಟುವೆರಲಿಂ ||
ಕಂದೆ ಮೊಗಸಿರಿಯೆಸಟ್ಗಣ್ಣೊಸಱೆ ಮೈಬಣ್ಣ |
ಗುಂದೆ ಬೆಮರುಣ್ಮೆ ಬಿಸುಸುಯ್ಲ್ದುರ್ ಮೂಗರಳೆ |
ಚೆಂದುಟಿಯೊಳಿಂಪಡಗೆ ಪೇಳ್ದಳಿನಿಯಂಗೆ ನಿಟ್ಟುಸಿರಿಂ ಸರೋಜಾನನೆ ||೩೯||

ವರ್ಮದಿಂ ಖಳನನಡ್ಡೈಸಲ್ ಜಟಾಯು ನಿಜ |
ಮರ್ಮಮಂ ಪೇಳ್ದುಟಿದನೆನಲೆತ್ತಲೆಡೆ ಸತ್ಯ |
ಧರ್ಮಕಿನ್ನಕಟಕಟ ! ಖಳರಂತರಂಗಮಂ ಬಲ್ಲರಾರಿಳೆಯೊಳೆನ್ನ ||
ಕರ್ಮಪಾಕದೊಳಸುರನುಯ್ದೊಡಂ ಕಾವೆನೆಂ |
ದೊರ್ಮನದೊಳೊದವಿದಾಪದ್ಬಾಂಧವಂಗೆ ಸಾ |
ವಿರ್ಪ ನೆನೆನೆನೆದೊಡಂ ತೀರದಹಹಾ ! ಪರಹಿತೇಚ್ಛುಕರ ಜನಸಮದೆಂತೋ ! ||೪೦||

ಎಂಬನ್ನೆಗಂ ವನಂ ಕಂಡಡಗಿದಂತಾಗೆ ।
ಮುಂಬರೆದು ಪುಷ್ಪಕಂ ಬರುತಿರಲ್ಕಿತ್ತ ರಾ ।
ಮಂ ಬೆರಲ್ಚುದಿಯಿಂ ಸಮೀಪಿಸಿದ ಪಂಚವಟಿವಿಪಿನಮಂ ತೋಱುತೆಂದಂ ॥
ಅಂಬುಜಾನನೆ ದನುಜೆ ಕಾಡಿದೆಡೆ ನೋಡಿತ್ತ ।
ಲಂಬಿಂ ಸಹೋದರಂ ಮಾನಗಳೆದಿರ್ಪ ತಾ ।
ಣಂ ಬವರಮುಖದಿ ಖಳರಟಿದ ನೆಲೆ ಪೊಮ್ಮಿಗಂ ನಲಿದುದಿಲ್ಲಿತ್ತಲೆಂದು ॥೪೧॥

ಅರಗಿಳಿಯನುಟಿದ ಪಂಜರದಂತೆ ಜೀವನಂ ।
ತೊಱೆದ ತನುವಂತೆ ಭಗಣೇಶನಡಗಿರ್ದ ಕಾ ।
ರಿರುಳಿನಾಗಸದಂತೆ ತೋರ್ಪುದೆಲೆವನೆಯಂದಿನೆಡೆಯ ನೋಡಬ್ಜಾನನೇ ॥
ಪರೆದು ಕೀಡ್ಮೊಗಗೊಂಡು ಮಾಧವೀಲತೆಯೆ ಮಾ ।
ಮರನೊಳೊಪ್ಪಂಬಿಟ್ಟುದಿತ್ತಿತ್ತ ಬಾಡಿದುದು ।
ಕುರುವಕಂ ನೋಡೆಂದು ತೋಱೆ ಬಟಿಕಾರಥಂ ಪರೆದುದುತ್ತರಕೆ ಜವದಿ ॥೪೨॥

ದಾಟಿ ಪುಣ್ಯಕ್ಷೇತ್ರಮಂ ತೊಱೆದು ತೊಱೆಯಂ ಮ ।
ಹಾಟವಿಯನಗಲಿ ಬಿಟ್ಟಾಶ್ರಮಂಗಳ ಚಿತ್ರ ।
ಕೂಟಮಂ ಕಡೆಗೊತ್ತಿ ಜಗುನೆಯಂ ಮೀಱಿ ಭಾರದ್ವಾಜನೆಡೆಯನುಟಿದು ॥
ನೋಟಕಳವಟ್ಟುದಿಲ್ಲೆನೆ ಧಾತ್ರಿ ಪುಷ್ಪಕಂ ।
ಸಾಟಿದೋಱದೆ ನಡೆಯಲಿತ್ತಲತ್ತಲ್ ಹನುಮ ।
ನೋಟಗೊಂಡ್ಯೆದಿದಂ ಪವನಾಧ್ವದೊಳ್ ರಾಮನಾಜ್ಞೆಯಂ ಶಿರದೆ ಪೊತ್ತು ॥೪೩॥

ಏನೆಂಬೆ ಪವನಜನ ವೇಗಮಂ ರಾಘವಂ ।
ತಾನೆ ಮುಂದಟ್ಟಿದಂ ಬಟಿಕಿದಿರ್ಗೊಂಡು ಸ ।
ನ್ಮಾನಿಸಲ್ಕೆಂದು ವನಗಿರಿನದಿನದಂಗಳಂ ಪೇಟಿ ಕಳುಪುವನೊ ಹನುಮಂ ॥
ಆನರೇಂದ್ರನ ಕಾಣ್ಬ ತವಕದಿಂ ತಾವೆ ಮೇಣ್ ।
ಸಾನುರಾಗದೊಳ್ಮೆದುವುವೊ ತಿಳಿಯದೆನುತಲನು ।
ಮಾನಗೊಳೆ ಸಹಚರಂ ಪವನನನಿಲಜನಚಲಮುಖ್ಯಮಂ ಕಳೆದ್ಯೆದಿದಂ ॥೪೪॥

ಚಿತ್ತವಿಪುದಾದೊಡೆಲೆ ವಿಪ್ರ ಮುಂತನಿತಱೊಳ ।
ಗಿತ್ತಲೊಂದಬ್ದಮಂ ಮನ್ವಂತರಕೆ ಬಗೆದು ।
ಸುತ್ತಿ ಜಡೆಯುಟ್ಟು ನಾರುಡಿಗೆಯಂ ರಾಮನಂ ನೆನೆದು ನಂದಿಗ್ರಾಮದಿ ॥

ಬತ್ತಿ ಮೆಯ್ಯೊಳ್ ಭರತನೀರೇಱುವರುಷಮಂ |
ದತ್ತಪಾದುಕೆಯ ಸೇವೆಗೆ ಕಳೆದು ರಾಘವನ |
ಪೊತ್ತನೀಕ್ಷಿಸಿ ಕಾಣದಿರಲಿಂತು ಮಱುಗಿದಂ ಸೋದರರೊಳೆಱಕವೆಂತೋ ! ||೪೫||

ತಪ್ಪಲೊಳ್ ಕಲ್ಲರಳೆ ಗಿರಿಯುರುಳೆ ತಿರೆ ಪೊರಳೆ |
ತೆಪ್ಪ ಬಾನೊಳ್ ಪಾಱೆ ಕಡಲಾಱೆ ನಿಲಲಾಱೆ |
ಬಪ್ಪೆನೀಪೊತ್ತಿಗೆಲೆ ಭರತ ನೆಲೆಯಱಿತು ಸಲೆ ಸಂತಸದೆ ಪೋಪುದೆಂದು ||
ಒಪ್ಪುವಂತೆನ್ನ ಕೈದಟ್ಟಿ ಪುರಕಟ್ಟಿ ತೆರ |
ಳಿಪ್ಪ ರಾಮಂ ಬಾರದಿಹ ಕಾರಣಂ ತೋಱ |
ದಿಪ್ಪುದಿನ್ನುಂ ಕಾಣೆ ತನ್ನಾಣೆಗಿನ್ನೂಣೆಯಂ ತರ್ಪನೆಂತೊ ತಿಳಿಯೆಂ ||೪೬||

ಪಿತನಟಿದ ಶೋಕದಿಂದುಟಿದನೋ ಕೈಕೆಗೆ ಕು |
ಪಿತನಾಗಿ ಬಾರದಿರ್ಪನೊ ಮುನಿಗಳೊಲ್ದು ಸಲ |
ಪಿ ತಮಗಪ್ಪವನೆಂದು ಮನ್ನಿಸುತ್ತಿರಲಿರ್ದು ಮಱೆದನೋ ನಮ್ಮನಕಟ ! ||
ಸತಿಗದೇನೆಡರಾಯ್ತೊ ಸೋದರಂಗಣ್ಣಗೆ ವ |
ಸತಿಯೊಂದೊ ಬೇಱಾಯ್ತೊ ಬರ್ಪುದಂ ಕಾಣೆ ಸರ |
ಸತಿಯರಸನೆನ್ನ ಪಣೆಯೊಳ್ ಬರೆದುದೆಂತುಟೊ ರಾಮನಡಿಯಂ ಕಾಣ್ಬೆನೋ ||

ಮಿತ್ರಾನ್ವಯದೊಳುದಿಸಿ ದಶರಥತನೂಜಂ ಸು |
ಮಿತ್ರಾತ್ಮಜಂ ಕೂಡಿ ಸತಿಸಹಿತ ಕಾನನಕ |
ಮಿತ್ರಾನುಜಂ ಭರತನಿಂಗಾಗಿ ಪೋದನೆಂದಾಡಿ ದೂಱುವರೆನ್ನನು ||
ಕ್ಷತ್ರಿಗಿದು ಸರಿಯೆ ಬಟಕಣ್ಣನಂ ಬಿಡೆ ವಳ |
ಕ್ಷತ್ರಿದಶರಾಜನೆಡೆಗೆಯ್ದಲಿರ್ಪುದೆ ವಿಪ |
ಕ್ಷತ್ರಿಪುರವೈರಿಯಡಿಯಾಣೆ ಹತಭಾಗ್ಯನಾಂ ನೋಂತ ನೋಂಪಿನ ಫಲವಲಾ ! ||

ಸೇವೆಗೆಯ್ದುಹುದಿಲ್ಲಮಾಂ ಮನಃಪೂರ್ವಕಂ |
ಭಾವಿಸಿದುದಿಲ್ಲ ಭಯಭಕ್ತಿಯಿಂ ಲೀಲೆಗಳ |
ನಾವಗಂ ಕಂಡಿಲ್ಲವೊಡನಾಡಿತಿಲ್ಲ ಸೌಖ್ಯದೊಳೊಂದು ದಿನಮಾದೊಡಂ ||
ದೇವನೆಂದಱಿತುದಿಲ್ಲಣ್ಣನಂ ಲಕ್ಷ್ಮಣನ |
ನೋವಲಿಲ್ಲಕಟ ! ಭೂಜಾತೆ ಮನ್ಮಾತೆಯೆಂ |
ಬೀವಿವರ ಮನಕೆ ಬರಲಿಲ್ಲ ಬರಲಿಲ್ಲಮಿನ್ನುಂ ರಾಘವಂ ಪೋದವಂ ||೪೯||

ಕಾತಗಟಿವಂ ತಂದೆನಗ್ರಜನ ಪೊಱಡಿಸಿದೆ ।
ಮಾತೆಯರ ಮುಳಿಸಿಗೆಡೆಯಾದೆ ಮೇಣ್ ಬಂಧು ।
ಗಳ ಮಾತಿಗೊಳಗಾದೆ ಪರಿಜನಕೆ ಕೀೞಾದೆ ಪುರಜನರ ಬಿಱುನುಡಿಗೆ ತಡೆದೆ ॥
ಜಾತಿರಾಜರ ಪಟಿವನೊಳಕೊಂಡೆ ನಾನೀಧ ।
ರಾತಳವನಖ್ಯಾತಿಯಿಂ ಮಲಿನಗೆಯ್ದಿನೀ ।
ಪಾತಕಂ ಪೋಪುದೆಂತೆಂತಗ್ರಭವನ ಪದಕಮಲದರ್ಶನಮಪ್ಪುದೋ ॥೫೦॥

ಬುದ್ಧಿದೋಱದ ಪಸುಳೆಯಾದೊಡಂದಣ್ಣನಂ ।
ಶ್ರದ್ಧೆಯಿಂ ಸೇವಿಸಲ್ಕಕ್ಕು ಸುಫಲಂ ತನಗೆ ।
ಸಿದ್ಧವೆಂದಱಿತು ಕೌಶಿಕನುಯ್ಯೆ ರಾಮನಂ ಕೂಡೆ ತಾಂ ತೆರಳಿ ಬಟಿಕ ॥
ವೃದ್ಧಿಗೊಂಡೈತಂದು ಪಿತನನುಜ್ಞೆಗೆ ವನಕೆ ।
ಸದ್ಧರ್ಮಮಂ ಪಿಡಿದು ರಾಘವಂ ಪೊಱಡೆ ಸಂ ।
ಪದ್ಧರೆಯನಬಲೆಯಂ ಮಾತೆಯಂ ತೊಱೆದು ಲಕ್ಷ್ಮಣನೈದಲೇಂ ಧನ್ಯನೋ ॥೫೧॥

ಇಷ್ಟದಿಂ ಕೆಳದಿಯರೊಳಾಡುತಂತಃಪುರದಿ ।
ಮೃಷ್ಟಾನ್ನಮಂ ಸವಿದು ರನ್ನದೊಡವೊಳ್ಳುಡೆಯ ।
ತುಷ್ಟಿಯಿಂ ಗಾಡಿಮಿಗೆ ಪಟ್ಟು ಮೃದುತಲ್ಪದೊಳ್ ಶುಕನ ನುಡಿಗೇಳ್ದು ಸುಖಮಂ ॥
ಕಷ್ಟದಿಂ ವನದೊಳೋರ್ವಳೆ ತಿರಿದು ಬಟಲುತ ನಿ ।
ಕೃಷ್ಟದುಣಿಸುಂಡಱೆಯೊಳೊಱಗಿ ನಾರುಡಿಗೆಯಿಂ ।
ದುಷ್ಟಕೇಸರಿಯ ದನಿಗೇಳ್ದು ದುಃಖದಿ ತೊಱೆಯೆ ಸೀತೆಗೆ ಮನಂ ಕರಗದೇ ॥೫೨॥

ತಂಬೆಲರ್ಸೋಂಕೆ ಬಳ್ಕುವ ಲತಾಂಗಮದಿಱಿಸಿ ।
ಲಂ ಬೇಱೆ ತೆಡೆದುಂಟೆ ಬಗ್ಗದೊವಲಂ ಕಂಡೊ ।
ಡಂ ಬೆರ್ಚುವೆರಳೆಗಣ್ ಪರಿವ ಪೆರ್ಬುಲಿನೋಟಮಂ ಸಹಿಸಲುಂಟೆ ವನದಿ ॥
ತುಂಬಿಯುಲಿಗಳ್ಕುವತಸೀಕುಸುಮಕರ್ಣವೆಂ ।
ತಿಂಬಕ್ಕು ಸಿಂಹಘರ್ಜನೆಗೆ ಬಿದುಗಲ್ನೆಲದೊ ।
ಳುಂ ಬಾಡುತಿರ್ಪ ತಳಿರಡಿ ನಡೆಯೆ ಕಾಪಥದೊಳೆಂತಪ್ಪುದವನಿಸುತೆಗೆ ॥೫೩॥

ಪುಟ್ಟಿದೊಡಮರಸನಿಂಗರಸುಗೆಯ್ಯದೆ ಪೊಱಲ ।
ಬಿಟ್ಟು ವನವನಜವನಚರರ ಪಾಲಿಪ ಮನಂ ।
ಪುಟ್ಟಿ ಗಡ ತೆರಳಿದಂ ಹರಿಯ ಮಹಿಮೆಯನಾವನಾವಗಂ ತಿಳಿದುದುಂಟೆ ॥

ದಟ್ಟಡಿಯ ಸೋಂಕಿನಿಂ ಕಲ್ಗಳೆನಿತೆನಿತೊ ಕುಡಿ |
ದಿಟ್ಟಿಗೆಡೆಗೊಂಡು ಕಾಟ್ಕಿಗಗಳೆನಿತೆನಿತೊ ವ್ಯ |
ಮುಟ್ಟೆಲರ್ ಸೋಂಕೆ ಭೂಜಂಗಳೆನಿತೆನಿತೊ ಪಾವನಮಾದುವಾರಾಮನಿಂ ||೫೪||

ರಾಜಿಸುವ ಸಾಲಮಲ್ಲಿದು, ಕಂದರಂ ಭುವನ |
ರಾಜಿಯಲ್ಲಿದು, ಮಹೀಧ್ರಶ್ರೇಣಿಕಟಕಮಿದು |
ರಾಜಹರ್ಮ್ಯಾಗ್ರಮಲ್ಲುತ್ಸಮಿದು ಕೊಳನಲ್ಲ, ನಿರ್ಝರಂ ಸರಯುವಲ್ಲ ||
ಸಾಜಮಿದು ಗಹನಮಾರಾಮಮಲ್ಲ, ರಸಾಲ |
ಭೂಜಮಲ್ಲಿದು ವಲಂ ಕಾಷ್ಠವೃಕ್ಷಂ, ಮೃಗಗ |
ಳೀಜನಗಳಲ್ಲದಲ್ಲೆನೆ ರಾಮನುಟಿದ ಪೊೞಲಲ್ಲಮಿದು ವಿಪಿನದೇಶಂ ||೫೫||

ಪಾಪಿ ತಾನಾದೊಡಂ ಕೈಕೆಯುಟ್ಟಿದಳೆಂದು |
ಕೋಪಿಸಿದೊಡಂ ಪೆತ್ತ ಮಾತೆಯೊಳ್ ತಪ್ಪುಂಟೆ |
ಯೀಪುರದ ಜನರೊಳನ್ನಯಮುಂಟೆ ಕುಂದುಂಟೆ ಮಂತ್ರಿಗಳೊಳರಸಾಣೆಗೆ ||
ಲೋಪಮಿನ್ನುಂಟೆ ಪರಿಜನರೊಳಗೆ ಮೇಣ್ ಮನ |
ಸ್ತಾಪಮಿರ್ಪುದೆ ಬಂಧುವರ್ಗದೊಳಗಿಂತೆನ |
ಲ್ಕೀಪರಿಯೊಳೆಲ್ಲರಂ ತೊಱೆದಿರ್ಪನೇತಕಿನ್ನುಂ ಬಾರನಾರಾಮನು ||೫೬||

ತೋಱ ನೀಂ ದೇವೇಂದ್ರ ರಾಘವೇಂದ್ರನ ಕರೆದು |
ತಾರ ಪಾವಕ ವಿಪಿನವೈರಿಪಾವಕನ ಕರ |
ತಾರ ನೀನಿತ್ತಲಂತಕ ತಾಟಕಾಂತಕನ ಪುಣ್ಯಜನ ಪುಣ್ಯಜನನಂ ||
ವಾರಾಶಿರಾಜ ಗುಣವಾರಾಶಿರಾಜನ ವಿ |
ಚಾರಿಸ ಜಗತ್ಪ್ರಾಣ ನೀಂ ಜಗತ್ಪ್ರಾಣನನೆ |
ಲೇ ರಾಜರಾಜ ಮಮರಾಜರಾಜನನೀಶ ಪೇೞ್ದಟ್ಟ ಸರ್ವೇಶನಂ ||೫೭||

ತಡೆಯಲೇಕಿನ್ನವನ ಪುಡುಕಿದಪೆ ತಾನೆ ಮೇ |
ಣೊಡಲ ಬೈತಿಟ್ಟಗ್ನಿಯೊಳ್ ಪೋಪೆನೆಂದು ಸಂ |
ಗಡಿಸಿದಂ ಕಾಷ್ಠಮಂ ಬೆಱಗಾಗಲಾಗಳಾಗಸದೊಳಮರರ್ ಭಕ್ತಿಗೆ ||
ಒಡನೆ ಕಿಚ್ಚೊಟ್ಟೆ ಪೊಗೆ ಪೊಗೆದಟಿದು ಬಳೆದುದುರಿ |
ಸುಡೆಗೊಂಡು ಛಿಟಿಛಿಟಿಲ್ ಛಿಟಿಲೆಂದು ಭರತನಂ |
ಬಿಡು ಸಾಸಮಂ ದುಗುಡಮಟಿದು ಸಂತಸಮಪ್ಪು ದೆಂದೆಚ್ಚರಿಪ ತೆಱದೊಳು ||೫೮||

ಮತ್ತೆ ಕೇಳ್ ಮುನಿನಾಥ ಪೌರಜನರನಿತಱೊಳ್ |
ಮುತ್ತಿ ತಮಗಟಲ್ದೆಂದರರೆಬರ್ ಮನವಿ |
ನಿತ್ತು ಕಲ್ಲಾಯ್ತು ರಾಘವಗೆ ತಮ್ಮನೊಳಕಟ ! ಬಾರನಿನ್ನುಂ ನಗರಿಗೆ ||
ಪೊತ್ತಾದುದಿಲ್ಲಮೆಂದೊರೆದರರೆಬರ್ ಕೆಲರ್ |
ಸುತ್ತಿ ಕಾಡಂ ಬರಲ್ ವೇಳೆಯಱಿದಪುದೆ ಮೇ |
ಣಿತ್ತಣದು ಗಡು ಬಱಿದೆ ಬಱಿದೆ ಕಿಚ್ಚಂ ಪುಗುವ ಭರತಗಿಂತೆಂದುಸಿರ್ದರು ||೫೯||

ಇಂತಖಿಳರೇವೇಳ್ವೆನಟಲುತಿರಲಿತ್ತ ಭರ |
ತಂ ತನುವನರ್ಪಿಸುವೆನೆಂದು ಶ್ರೀರಾಮನಂ |
ಚಿಂತಿಸುತ ಮನದಿ ಬಲಿಬಿಟುತಿರ್ದನನ್ನಯಂ ವಹ್ನಿ ಚಿಂತಾಗ್ನಿಗೊರೆಯೆ ||
ಪಿಂತೆ ನೀಂ ವೇದಚೋರನ ಕೊಂದೆ ತಂದೆ ಬಟಿ |
ಕಾಂತೆ ಬೆನ್ನೊಳ್ ಧಾತ್ರಿಯಂ ದಯದಿ ತಂದೆ ಧರೆ |
ಯಂ ತಱಿದು ಖಳನ ಮಗು ಮಱುಗಲ್ಕೆ ತಂದೆ ಕಂಬಂ ಬಗಿದು ಪಾಲಿಸೆನುತ ||೬೦||

ದಾನವಂ ಬಲಿ ಬಲಿಯೆ ಸೋರ್ಕಿಸಿಂ ಧಾತ್ರಿಯಂ |
ದಾನವಂ ಮೂಱಡಿಯ ಬೇಡಿ ನೆವದಿಂ ಮೆಟ್ಟಿ |
ದಾ ನವಪದನ್ಯಾಸದಿಂ ಖಳನ ಕೀಳೆಗೆ ದೇವ ವಾಮನರೂಪಿನಿಂ ||
ಮಾನವಾಧಿಪ ಬಾಹುಜನ್ಮರಂ ಮನದೊಳನು |
ಮಾನವಾಂತಿಲ್ಲದಿರ್ಪತ್ತೊರ್ವೆ ಗೆಲ್ದ್ವ ಸ |
ಮಾನವಾರದಟು ತವದರ್ಪಕೆಲೆ ವಿಪ್ರರಿಂಗಿತ್ತೆ ಮೇಣೀಧರೆಯನು || ||೬೧||

ರಾಮ ಜಯರಾಮ ದಶರಥರಾಮ ಕೋದಂಡ |
ರಾಮ ಸೀತಾರಾಮ ಪಟ್ಟಾಭಿರಾಮ ರಘು |
ರಾಮ ಕೋಸಲರಾಮ ನಿತ್ಯಾತ್ಮರಾಮ ಮೋಹನರಾಮ ಮಿತ್ರರಾಮ ||
ರಾಮ ಕೌಶಿಕರಾಮ ಸಾನಂದರಾಮ ಶಿವ |
ರಾಮ ಕೌಸ್ತುಭರಾಮ ಕಲ್ಯಾಣರಾಮ ಶ್ರೀ |
ರಾಮ ಸುಂದರರಾಮ ಸುಕುಮಾರರಾಮ ಶಾಂತಾರಾಮ ಭದ್ರರಾಮ ||೬೨||

ಚಿತ್ತದೊಳ್ ಶ್ರೀರಾಮಮೂರ್ತಿಯಂ ಕೀರ್ತಿಯಂ |
ಪೊತ್ತಿಂತು ಜಿಹ್ವಾಗ್ರದೊಳ್ ಭರತನನವರತ |
ಸುತ್ತಿ ಬಲವರುತಿರಲ್ಕನಲನಂದನಿಲನಂದನನಿತ್ತ ಪವನಾಧ್ವದಿ ||

ಒತ್ತಿಗೊಂಡ್ಯೆತರಲ್ಪೊಗೆಯ ಕುಱುಪೊಗೆಯಲುರು |
ಪೆತ್ತಣತ್ತಂ ಧಾತ್ರಿಗಿಟಿದು ಜನರುಟಿದು ಮನ |
ಮಿತ್ತು ಕಾಣುತ್ತಿರಲ್ ಸ್ಕೈಪಿಡಿದು ಕ್ಯೆಪಿಡಿದು ಕಟ್ಟುಸಿರೊಳವನೆಂದನು ||೬೩||

ದಕ್ಷನಾದೊಡೆ ಸಾಹಸಂದೋರ್ಪೆ ದಿಟವ್ಯೆ ಪ್ರ |
ದಕ್ಷಿಣೆಯ ಗೈವೆ ಚಲಮಂ ಪಿಡಿದು ಮೇಣಾಶು |
ಶುಕ್ಷಣಿಯನಹಹ ! ನಿನ್ನವೊಲಾರುಮಂ ಕಂಡುದಿಲ್ಲ ಮೇದಿನಿಯೊಳೆತ್ತಂ ||
ದಕ್ಷಿಣಾಶೆಯದತ್ತಣಿಂ ಬರ್ಪನೆಲೆ ದೀನ |
ರಕ್ಷಕಂ ಸತಿಸುಮಿತ್ರಾತ್ಮಜರ್ಸಹಿತ ನೋ |
ಡೀಕ್ಷಣಂ ಬರ್ದೇನಮರ್ದ ತಡೆತಡೆ ಬಿಡುಬಿಡೀಮರುಳ್ತನವನಕಟ ! ||೬೪||

ರಾಮನ್ಯೆತದಂನಸುರಾಂತಕಂ ಭುವನಾಭಿ |
ರಾಮನ್ಯೆತಂದನನುಗತಭಕ್ತಚಿತ್ಸುಖಾ |
ರಾಮನ್ಯೆತಂದನಮರೇಂದ್ರಪೂಜಿತಪಾದಪದ್ಮನೊಡನ್ಯೆತಂದನು ||
ಸೋಮಕೋದಂಡಭೇದಕನರ್ಕಕುಲವಾರ್ಧಿ |
ಸೋಮನೀಗಳೆ ಬಂದನಿತ್ತಲವಧರಿಪುದೆಲೆ |
ಸೋಮಪುರದೊಡೆಯ ಲಕ್ಷ್ಮೀಮನೋಹರನಿರದೆ ಬಂದನೆಮ್ಮಂ ಪೊರೆಯಲು||೬೫||

ಇಂತು ಶ್ರೀರಾಮ ಪಟ್ಟಾಭಿಷೇಕದೊಳ್ ಮೂಱನೆಯ ಸಂಧಿ
ಮುಗಿದುದು.

## ನಾಲ್ಕನೆಯ ಸಂಧಿ.

ಸೂಚನೆ ॥ ಭರತನಂ ಕಂಡು ನಂದಿಗ್ರಾಮದೊಳ್ ಮನ್ನಿ ।
ಸಿರದೆ ಪುಷ್ಪಕವೇರ್ದು ಕಪಿನಾಯಕರ್ ಸಹಿತ ।
ಪುರಜನರ ಮನ್ನಣೆಯ ಕೈಕೊಂಡು ರಾಘವಂ ನಿಜನಗರಿಗೈತಂದನು॥

ಅವಧರಿಪುದೆಲೆ ತಪೋಧನ ಬಟಿಕ ಪವನಸಂ ।
ಭವನ ಕಂಡಕ್ಷಿಯಂ ಮೇಣವನ ನುಡಿಗೇಳ್ದು ।
ಕಿವಿಯನೊರ್ವಿಯಿ ನಂಬದನುಮಾನಮುಖದಿ ನಿರ್ಧರಿಸಿದಂ ಸಹಜವೆಂದು ॥
ಭವಭವಾಂತರದ ಸುಕೃತಮೆ ರೂಪುಗೊಂಡು ಧರೆ ।
ಗವತರಿಸುತಿದಿರೊಳೇನಿಹುದೊ ರವಿ ತಾನೆ ತ ।
ನ್ನವಸಿವಂ ಕಿಡುವನೆಂದಟ್ಟಿದನೊ ಕಾಣೆನೀತನನೆಂದು ಭರತನಿರ್ದಂ ॥೧॥

ಪುಟ್ಟಿದುದು ಭಯವೊರ್ವಿಯಚ್ಚರಿಯದೊರ್ವಿ ಮನ ।
ಗುಟ್ಟೊರ್ವಿ ನಗೆಯೊರ್ವಿ ಕಡುಪೊರ್ವಿ ಹನುಮನಂ ।
ದಿಟ್ಟಿಸಲ್, ಸಟೆಯೊರ್ಮೆ ದಿಟವೊರ್ಮೆ ಮುದವೊರ್ಮೆ ಭರತಂಗೆ ನುಡಿಗೇಳ್ವೊಡೆ ॥
ಬಿಟ್ಟೆಂತುಮಿರದೆ ಚಂಚಲಮನಿಂತೆಂದನೆಲೆ ।
ಕಟ್ಟಿದಿರೊಳೈತಂದು ಮರಣೋನ್ಮುಖಂಗೆ ಸೊದೆ ।
ಗೊಟ್ಟು ಕಾವಂತೆ ನುಡಿಸೊದೆಯೊಳೆನ್ನಂ ಪೊರೆಯಲುಜ್ಜುಗಿಪೆ ನೀನಾವನೈ ॥೨॥

ದಿಟವೆ ನಂಬಲ್ಬಹುದೆ ರಾಘವನ ವಾರ್ತೆಯಂ ।
ಕಟಕಿಯೇ ಮೇಣ್ಬಱಿದೆ ಬಟಲಿಸದಿರಿಂತೆನಗ ।
ಕಟ ! ಕಂಡುದೆಲ್ಲಿ ನೀನವನೊಳನುಬಂಧವೆಂತಾದುದೇನೆಸಗುತಿಹರು ॥
ಅಟವಿಯಿಂ ಪೊಱಟಿಹರೆ ಬಹರೆ ದಾರಿಯೊಳೇಂ ಪೊ ।
ಱಟುದಿಲ್ಲವೇ ರಾಮನೊಳ್ಳಿತಾಗಿಹನೆ ಪ ।
ರ್ಯಟನದಿಂ ಬಾಡಿಹರೆ ಬರುತುಮಿರ್ಪರೆ ಬಹರೆ ಬಂದರೇ ಪೇಳೆಂದನು ॥೩॥

ವ್ಯಸನಮೇಕೆಲೆ ಧೈರ್ಯಮುಡುಗದಿರ್ ತನ್ನಾಣೆ ।
ಪುಸಿಯಲ್ಲ ಬರ್ಪನೀವಾರ್ತೆಯಂ ನಿನಗೊಲ್ದು ।
ಬೆಸಸೆಂದು ರಾಘವಂ ಪೇಳ್ದಟ್ಟಿದೊಡೆ ಬಂದೆನೆನ್ನ ಪರಿಯಂ ಕೇಳ್ವೆಯಾ ॥

ಅಸುವಾಗಿ ಜಗಕೆ ವಿಷ್ಣುವಿಗೆ ಸಖನಾಗುತೊ ।
ರ್ದೆಸೆಯಾಣ್ಮನೆನಿಪ ಮಾರುತನ ಪೊಲಬುಂಟೆ ತಾ ।
ನೊಸೆದಂಜನಾದೇವಿಯೊಳ್ ಪಡೆದ ಹನುಮನೆಂದೆಂಬರೆನ್ನಂ ಜಗದೊಳು ॥೪॥

ವನದೊಳಿರೆ ಸತಿಸೋದರರ್ವೆರಸು ರಾಘವಂ ।
ದನುಜನೊರ್ವಂ ಕೈತವದೊಳುಯ್ಯಲಬಲೆಯಂ ।
ಮನಮಱುಗಿ ಪುಡುಕಿ ಬರೆ ಬರೆ ತನ್ನ ಸ್ಶೈಪೊಡರ್ಚಲ್ಕಿಂತು ಕೂಟವೆಮಗೆ ॥
ದಿನಪಾತ್ಮಸಂಭವಂ ಬಯಸಲಾದುದು ಬಟಿಕ ।
ಮನುವರದೊಳಸುರನಂ ಗೆಲ್ದು ಮೋಣರಸಿಯಂ ।
ತನಗೊಪ್ಪಿ ತರ್ಪನಕ ಸೇವಿಸಲ್ ಕರೆವರೆನಗಾರಾಮದೂತನೆಂದು ॥೫॥

ನೊಂದನಗ್ರಜಗಡಸಿದೆಡರ ನೆನೆನೆನೆದು ತಱು ।
ಸಂದನೆಂತಿರ್ದೊಡಂ ಬರ್ಪುದಕೆ ಮನವುಱಿದು ।
ಮುಂದೆಸೆಯ ಹನುಮನೊಡನೆಂದನೆಲೆ ವೀರ ನೀನೇ ಧನ್ಯನಿಳೆಗೆ ನಿನಗೆ ॥
ವಂದಿಸುವೆನ್ಕೆ ರಾಮದಾಸಂಗೆ ದಾಸನಾ ।
ನಂದಿಂದಿಗುಂ ನೋಂತುದಿಲ್ಲ ನಿನ್ನೋಲ್ ಬಟಲಿ ।
ಬಂದೆ ಸಾಹಸಿಯಹುದು ವಿಶ್ರಮಿಪುದೆಂದು ಕುಳ್ಳಿರಿಸಿದಂ ಪೀಠವಿತ್ತು ॥೬॥

ತನತನಗೆ ಪರ್ಬಿದುದು ರಾಘವನ ವಾರ್ತೆ ಪ ।
ತ್ತನದೊಳೆಲ್ಲೆಲ್ಲಿಯುಂ ಕತ್ತುರಿಯ ಪೊಱು ಮಾರು ।
ತನ ಕರದೊಳಿತ್ತಂತೆ ಮುನ್ನಗಲ್ದಿನನ ಬರವಂ ತೋರ್ಪರುಣನ ನೋಡೆ ॥
ಮನವೊಲಿವ ಬೆಳ್ದಾವರೆಗಳಂತೆ ಬಟಿಕ ಹನು ।
ಮನ ಕಂಡು ಸಂತಸಂ ಮಿಗೆ ಸೇರ್ದು ಮನ್ನಿಸುತು ।
ಮನತಿದೂರದೊಳಿರ್ದು ಬೀಸಿದರ್ ಪೂಸಿದರ್ ಕೆಲಬಲದಿ ನೆರೆದ ಜನರು ॥೭॥

ವರಮುನಿಪ ಲಾಲಿಸ್ಕೆ ವಿಪಿನದಿಂ ವಡೆತರ್ಪ ।
ವರನೀಕ್ಷಿಸಲ್ಕೆಂದು ಕಾಮಿನೀಜನಗಳ್ ಕು ।
ವರರನೊಡನೆತ್ತಿ ಕೊಂಡಿರದೆ ಚೆಂಬೊನ್ನ ನೆಲೆವಾಡಮಂ ಸಾರ್ದಿರ್ದರು ॥
ಸರಸದಿಂ ತಿರ್ದಿ ಬೈತಲೆಯ ಜೋಲ್ಮುಡಿಗೆ ಪೂ ।
ಸರಮುಡಿದು ಕಪ್ಪನೊಪ್ಪಂಬೂಸಿ ಕಣ್ಣಿಗವ ।
ಸರಕೆ ಕನ್ನಡಿಗೆಂಡು ಸರಿದು ಮೇಲುದೆಱ ಸೆಱಗಂ ಸರಿದು ಕೈಗಡಗಮಂ ॥೮॥

ತೊಟ್ಟಿಲೊಳ್ ಪುಟ್ಟ ಮಗು ಪಟ್ಟಿರಲ್ ಮುಟ್ಟಿ ಮೆಟ್ಟಿ ।
ನಿಟ್ಟಿಸುತಮೊಟ್ಟಿರೆಂದೊಟ್ಟಿಗನನಿಟ್ಟಿವನ ।
ಬಿಟ್ಟು ಪಣೆಗಿಟ್ಟು ಪೊಂಬೊಟ್ಟನೆದೆಗಟ್ಟಿಯಾದಿಟ್ಟೆ ಬಿಣ್ಬಟ್ಟಮೊಲೆಗೆ ॥
ತೊಟ್ಟುಡಿಗೆ ಪಟ್ಟೆ ನೆಱೆದುಟ್ಟುಕೊಂಡೊಟ್ಟಜದ ।
ಪಟ್ಟಣಿಗರಿಟ್ಟೆಡೆಯ ಬಟ್ಟೆಯಂ ಮೆಟ್ಟಿ ಬರೆ ।
ದಿಟ್ಟಿಗೆಡೆಗೊಟ್ಟು ಪಿಂದಟ್ಟೊರ್ವಳಟ್ಟಸದಿ ಕೊಟ್ಟಿಪೊಱಮಟ್ಟಳಾಗ ॥೯॥

ತೆಳ್ಗದಪದೆಸೆಯೆ ನೇರ್ಪಣೆ ಪೊಳೆಯೆ ಮಿಸುಗೆ ಕೌಂ ।
ಕುಬ್ಗಳುಂ ನಸುಬಳ್ಕೆ ಜೋಲ್ದಾಡೆ ಮುಂಗುರುಳೆ ।
ಸಳ್ಗಣ್ಣಮಿರ್ದೊರ್ಪೆ ಕನ್ನದೊಡವಲುಗೆ ಕಂಕಣನಿಸ್ವನಂ ಪೊಣ್ಮಿರೆ ॥
ಬೆಳ್ಗೊಡಮೊಲೆಗಳದಿರೆ ಚದುರೆಯೊರ್ವಳ್ ನವಿರ ।
ನೊಳ್ಗಯ್ಯ ಜಂತದಣಿಗೆಯಿನೆತ್ತಿ ಬಾಚಿ ಪೊಱ ।
ಟಳ್ಗದಗದಿಸೆ ನಡು ಪೊಡರೆ ಜಘನಮುಳ್ಕೆ ಮೆಲ್ಲಡಿ ನಡುಗೆ ಕಡಗಮುಲಿಯೆ ॥

ಪಣ್ಣಿತ್ತು ಪಂಡಿತನನೆಳೆದಳಿರನಿಕ್ಕಿ ಕೆಂ ।
ಗಣ್ಣನಂ ಪಾಲೆಱೆದು ಹಂಸನಂ ವತ್ಸಮಂ ।
ತಣ್ಣೀರ್ಗುಡಿಸಿತೊಱೆದುಮಱೆದುಮನೆಗೆಲಸಮಂ ಪೋಣ್ಬಟಲ್ಮುಡಿಯತುಱುಬಿ ॥
ಸಣ್ಣನಡುವಿಗೆ ಸಡಿಲ್ನಱಿಯೊಟ್ಟಿ ಮೇಲುದಂ ।
ತ್ರಿಣ್ಣಮೊಲೆಯೆಡೆಗೆ ಬರೆಸೆಳೆದು ಪೊಱಮಟ್ಟೊರ್ವ ।
ಪೆಣ್ಣೈದಿದಳ್ ನುಡಿಗೆ ನಡೆಗೆ ಗಾಡಿಗೆ ಸೋಲಲೊಡನೆ ಗಿಳಿಯಂಚೆ ನವಿಲು ॥೧೧॥

ರತಿಯೆಂಬೊಲರಗಿಳಿಯನೆತ್ತಿ ಕೊಂಡೊರ್ವೆ ಭಾ ।
ರತಿಯೆನಲ್ ಬಾಜಿಸುವ ವೀಣೆವಿಡಿದೊರ್ವಳ್ ನಿ ।
ರತಿಶಯದಿ ಸಿರಿಯಂತೆ ಕಮಲಮಂ ಪಿಡಿದೊರ್ವಳಿಂತುಮೋರೊಂದೆಡೆಯೊಳು ॥
ಮತಿಮನವನಪ್ಪೆ ಕೌತುಕಮಾಗೆ ಬರ್ಪ ವಸು ।
ಮತಿಯಧೀಶ್ವರರಾಘವನ ನೋೞ್ಪೆವೆಂದು ತಾ ।
ಮತಿಬಲಾಯನದೊಳೀಕ್ಷಿಸುತ ಸೌಧಾಗ್ರದೊಳ್ ಬಾಲೆಯರ್ ನೆಲಸಿರ್ದರು ॥೧೨॥

ಪಸುರೆಲೆಯ ಬೆಲ್ಲವತ್ತಂಗೆತ್ತು ಸೂಡಿ ಮುಡಿ ।
ಗಸವಸದೆ ಕಪ್ಪೆಂದು ಕತ್ತುರಿಯ ಕಣ್ಗಿಕ್ಕಿ ।
ಪೊಸಕುಂಕುಮಮಂ ಬಗೆದು ಪಣೆಗಿಟ್ಟು ಚಂದ್ರಮಂ ಕಾಂಚಿಯಂ ಗಳಕಮರ್ಚಿ ॥

ಒಸೆದಡ್ಡಿಗೆಯ ನಡುವಿಗಳವಡಿಸಿ ಪಾಲೆಂದು |
ಬಿಸಿಗಾವಿಗೆಯೊಳಿಟ್ಟು ಮಥಿತಮಂ ಪವಡಿಸಿದ |
ಪಸುಗೂಸನುೞಿದು ಪಡಿಗಟ್ಟಿ ನಡೆದಳ್ ಕಾಂಬ ತವಕದಿಂ ಬರ್ಪವರನು ||೧೩||

ಮನನಮಂ ಮಾಣ್ದು ಪುಸ್ತಕವನೊತ್ತಿಟ್ಟು ಜಾ |
ಣ್ತನದಾಟಪಾಡುಪಂತಂಗಳಂ ಮಱೆದು ವೇ |
ಳಿನವಸರದೂಟಿಗಂದೊಱೆದು ತುಱುವಿಂಡನೊತ್ತಟ್ಟಿನೊಳ್ ಬಿಟ್ಟು ಜವದಿ ||
ಅನಘರತಿವೀರರಪ್ರತಿಮಕುಶಲರ್ ದೀನ |
ಮಾನರಗ್ರಜನ್ಮಬಾಹುಜವೈಶ್ಯಪಾದಜರ |
ತನಯರ್ಕೈತಂದರಾಮ್ನಾಯಗೋಚರನನಧಿರಾಜನಂ ನೋೞ್ಪೆವೆಂದು ||೧೪||

ಮುದ್ದುವೊಗಮಿರದೆ ನಸು ನಗೆ ಬೀಱೆ ಕಾಲ್ಗಡಗ |
ಸದ್ದುಗುಡೆ ಪದಕಮುಯ್ಯಲನಾಡೆ ಕೂಡೆ ಸರ |
ಮುದ್ದವೊಲೆದೊಪ್ಪೆ ಪೊಂಜರಿಗೆ ತೋಳ್ಗಸೆಯೆ ಕೈಬಳೆ ಸಮಂ ತೋಱೆ ಬೞಿಕ ||
ಪೊದ್ದು ದುಗುಲವನುಟ್ಟು ಪೊಸಧೋತ್ರಮಂ ಬಣ್ಣ |
ಮದ್ದಿದೊಳ್ಪಿಡಿಗೋಲ ಪಿಡಿದು ಸಂಗಡಿಗರೊಡ |
ನೆದ್ದು ತೆರಳಿದನೊರ್ವ ಬಾಲಕಂ ಬರ್ಪರಾರೆಂಬುದಂ ನೋೞ್ಪೆನೆಂದು ||೧೫||

ಮುತ್ತಿನೈಸರವನೊಪ್ಪಂ ಸರಿದು ಪಿಂಜಗುಟ |
ಲುತ್ತರಿಗೆಯಂ ಸಮಂ ತಿರುಪಿ ಕಾಲ್ಗಡ್ಡೈಸ |
ಲೆತ್ತಿ ಬಿಡುನಿಱಿಯ ನಡುಸಡಿಲೆ ಸವನಿಸಿ ಪೊಱಟು ಬೀದಿಯೊಳ್ ಪೋಪರೊಡನೆ ||
ಮತ್ತೊರ್ವ ತರಳನೊಟ್ಟಾದನಿಂತೆಲೆ ಮೌನಿ |
ಸತ್ತಮನೆ ರಾಘವಂ ಬರ್ಪನೆಂಬೀವಾರ್ತೆ |
ಗೊತ್ತರಿಸಿ ಪುರಜನರ್ ಕಾಣ್ಬೊಱೆಯನೆಱೆಯಂತೆ ಹನುಮನೆಡೆಯೊಳ್ ನೆಱೆದರು ||

ಅಕ್ಕ ಪೇೞಾರವಂ ರಾಘವಂ ಬರ್ಪವಂ |
ರಕ್ಕಸನೆ ನರನೆ ದೇವನೆ ಸುಂದರನೆ ನೋಡೆ |
ಚಿಕ್ಕವನೆ ವೃದ್ಧನೇ ತರುಣನೇ ಶೂರನೇ ದೊರೆಯೆ ಕರುಣಿಯೆಸುಗುಣಯುತನೆ ||
ಒಕ್ಕಣಿಸು ತನಗೆ ಧಾರ್ಮಿಕನೆ ಪಗೆವನೆ ಧುರದಿ |
ಸೊಕ್ಕಿಗನೆ ತಕ್ಕವನೆ ಸಿಕ್ಕುವವೆ ಬರ್ಪುದೆಂ |
ದಕ್ಕೞಿದೆ ಮುಗ್ಧೆಯೊರ್ವಳ್ ನೆಱೆದ ಸಖಿಯರೊಳ್ ಕೇಳ್ದುದೆಂದಳ್ ವಿದಗ್ಧೆ ||

ನರನಂತೆ ತೋರ್ದು ದೇವರ ದೇವನೆನಿಸಿ ಸಂ ।
ಗರದಿ ರಕ್ಕಸರನಿಕ್ಕುವನಂತೆ ಕಣ್ಗೆ ಸುಂ ।
ದರನೆಣಿಸೆ ಕಿಱಿಯನೋಪಳ್ಗೆ ತರುಣಂ ಜ್ಞಾನವೃದ್ಧನತಿಶೂರನಿಳೆಗೆ ॥
ದೊರೆಯಧಿಕಧಾರ್ಮಿಕಂ ಪಗೆಗಳ್ಗೆ ಪಗೆವನೆಲೆ ।
ತರುಣಿ ತನ್ನವರೊಳುೞಿ ಸೊಕ್ಕಿಗಂ ಸೊಕ್ಕಿಗರಿ ।
ಗಱಿಯೆ ಸುದ್ಗುಣಮಣಿಯ ಬಣ್ಣಿಸಲ್ಕೆಂದು ಮಾರ್ನುಡಿದಳವಳೇಂ ಪ್ರೌಢೆಯೋ ॥

ಪೋದರಿತ್ತಣಿನೆಂದು ದಕ್ಷಿಣಕೆ ಕೆಲಬರೀ ।
ಹಾದಿ ಬರ್ಪುದಕೆಂದು ಪಶ್ಚಿಮಕೆ ಮೇಣರೆಬ ।
ರಾದಿಪಟ್ಟಣಕಿದೆಂದುತ್ತರಕೆ ಪೂರ್ವಮೆಂದುಱಿದವರ್ ಪೂರ್ವದಿಶೆಗೆ ॥
ವಾದಿಸುತ ನೋೞ್ಪ ನೆವದಿಂ ಪೋದರಿಂತು ಕೆಲ ।
ರಾದುದಿಲ್ಲೆಂದು ಸುತ್ತುವರೆತ್ತಲುಂ ಪಲರ್ ।
ಕಾದಿರ್ದರೊಗ್ಗಿತೆ ನಿಲಿಂಪದೆಸೆಯಿಂ ನೆರೆದ ಜನರೊಳ್ ತವಕಮೆಂತುಟೋ ॥

ನೋಡುವರ್ ದೆಸೆಯೆಂಟನೊರ್ವರ್ ಮೇಣೊರ್ವರ್ ಮಾ ।
ತಾಡುವರ್ ತಮತಮಗದೇಂ ಬಾರನೆಂದೊತ್ತಿ ।
ಗೂಡುವರ್ ನೆರೆದೊರ್ವರ್ ಪೆಱಗೊರ್ವರ್ ಜನರ ಗದ್ದಲಮಾಗೆ ರಯಮೊಪ್ಪಿರೆ ॥
ಓಡುವರ್ ಮನದೊಳಟಿಯಾಸೆಯುಱಿದೇ ಸರಿದು ।
ಪಾಡುವರ್ ನಲಿದು ಬಱಿಕೊರ್ವರ್ ಮತ್ತೊರ್ವರ್ ಬೆರ ।
ಲೇಡುವರ್ ದೂರದೊಳ್ ಬರ್ಪವರ ಕಂಡು ಬರ್ಪವರೆಂದು ವನವನುಱಿದು ॥೨೦॥

ವಾದ್ಯಮೊಂದೆಡೆಗೆ ಭೋರ್ಗುಡಿಸೆ ಪೆಣ್ಬಾಣ್ಬಡಿಯ ।
ದಾದ್ಯಂತಮುಡುಗದುಱಿ ಪೆರ್ಚೆ ಕೋಲಾಹಲಮ ।
ಭೇದ್ಯಮೆನೆ ಬಾಲಕರ್ಗಳಧಿಕಕಳಕಳಮುಣ್ಮೆ ಕೌತುಕಂ ಜನವನೊತ್ತೆ ॥
ಚೋದ್ಯಮೇನೊರೆವೆಂ ವಸಿಷ್ಠನೊಂದೆಡೆಗಪ್ಪರ್ ।
ಪಾದ್ಯಗಳನೆತ್ತಿ ಪೆಱತೊಂದೆಡೆ ಸುಮಂತ್ರಸಚಿ ।
ವಾದ್ಯರ್ ಪಿಡಿದು ಚಮರಮಂ ಪೊಱಟರಿಂತು ಕಂಡೆಂದನಾಪವನಸೂನು ॥೨೧॥

ಸಂತಮಿರ್ಪುದು ಸರ್ವರಿತ್ತಲಂಬರದತ್ತ ।
ಣಿಂ ತಡೆಯದ್ವೈತರ್ಪರೆಂಬನಿತಱೊಳ್ ಭಕ್ತ ।
ರೆಂತೊರೆದೊಡಂ ತನ್ನಬಿರುದೊದಗಿ ಬರ್ಪುದೆಂಬಧಿಕಮಹಿಮೆಯೊ ರಾಮನ ॥

ಸಂತತಂ ನಿರುಪಾಧಿಯಿಂ ಪೊಳೆವ ಮುಕ್ತಿಸೀ |
ಮಂತಿನಿಯ ಬೈತಲೆವಣಿಯೊ ಪರಂಜ್ಯೋತಿಯೊ ಮ |
ನಂ ತೊಡರದೆಂಬೊಲೆತ್ತಂ ಪುದಿದುದಾಗಸದೊಳೆಸೆವ ಪೊಸಪೊಳಪದೊಂದು ||

ಬಿಸುಗದಿರನಾಗೆ ತಿರ್ಯಕ್ಚರಂ ಮೇಣ್ ವಿಭಾ |
ವಸುವಾಗಲೂರ್ಧ್ವಜ್ವಲನ ತೋರ್ಪ ಪೊಳಪಿದೆ |
ಣ್ದೆಸಗೆ ಮಸಗಿರ್ಪುದೆತ್ತಣಿನೆಂದು ಕಣ್ಬಗೆಗೆ ಬಗೆಕಣ್ಗೆ ಸೋಲಲಿಂತು ||
ಬಿಸವಂದಮಾಗೆ ಸರ್ವರ್ ಬೞಿಕನುಕ್ರಮದಿ |
ನಸುಕೀೞ್ಬರಿಯೆ ಪಾಱಿದೆಂದು ಜನರೆಂದು ತಾ |
ನೊಸಗೆ ಪರ್ಬಿದುದು ರಾಘವ ಬಂದನೆಂದು ಪುಷ್ಪಕಮವನಿಗಿೞಿದು ಬರಲು ||

ಉರ್ಬೆ ನೆಱೆ ಜನರ ಸಂತಸಗಡಲ್ ನಗೆಜೊನ್ನ |
ಪರ್ಬೆ ಬಾಲರ ಸುಮಂತ್ರಾದಿನಾಯಕರಬಲ್ |
ಮರ್ಬಟಿಯೆ ನೀಱೆಯುರ ಕಣ್ವಕ್ಕಿ ನಲಿಯಲ್ ಭರತನ ಬಗೆನೈದಿಲರಳೆ ||
ಒರ್ಬಗೆಬೆಮರ್ವನಿಯನಿಬರೊಳೆತ್ತಂ ತೋರ್ದು |
ಪರ್ಬಿ ವೈನವಿರಗೆಯದೊಪ್ಪಿರಲೊಸಗೆಗವ್ಮೆ |
ಲರ್ಬಿಡದೆ ತೀಡಲಾದುದು ರಾಮಚಂದ್ರೋದಯಂ ಬುಧರ ಬಾಯ್ಸವಿಗೆನೆ ||೨೪||

ಕೇಳ್ದಣಿಯೆ ಮುನಿಪ ಬೞಿಕಸುರಾರಿ ತನ್ನವರಿ |
ನೆಟ್ದು ಪುಷ್ಪಕದಿಂದಮವನಿಗವತರಿಸಿ ಬರೆ |
ಬಾನ್ದಟಂ ಸ್ಮೈವೞಿದುದೆಂಬೊಲಾಗಳ್ ಜನರ ಜಯಜಯರವಂ ಪೊಣ್ಮಿರೆ ||
ಸೂಟ್ದಿರುಗುತಡಿವೇರನೇರ್ದು ಕಾಲ್ಗವಲಿನೊಳ್ |
ತೂಳ್ದಟ್ಟೆ ಕೊಂಬಿಂಗಡರ್ದು ನಗೆವೊಗದ ಪಣ್ಣಿ |
ನೊಳ್ದಿಟ್ಟಿಗೊಂಡುದು ಭರತನ ಕಣ್ಬುರುಳಿ ಬೞಿಕಾರಾಮಸಹಕಾರದಿ ||೨೫||

ತುಂಬಿ ಕೀೞ್ಬರಿವ ಕಣ್ಣೀರೊಳ್ ಮುೞುಂಗಿ ವೆಮ್ರ |
ಯಿಂ ಬಸಿವ ಕಿಱುಬೆಮರ್ನಸುಪೊಸ ಪೊಸಿ ಭರ |
ತಂ ಬಲಿದ ನವಿರುಡೆಯನುಟ್ಟು ರಘುರಾಮನಾಮವನಿಟ್ಟು ಮನದಿ ದಿಟದಿ ||
ಇಂಬುಗೊಂಡಕ್ಕಱೆಯಮರ್ದಂಡು ತನಗೆ ನೀ |
ಡುಂ ಬರ್ಪ ತಡೆಯುಸಿರ್ದೇಗಿ ವೊಗದನುರಾಗ |
ವೆಂಬ ನಱುದಂಬುಲಂಸವಿದಗ್ರಜನ ದರ್ಶನೋತ್ಸವಕೆ ಪೊಱಟನಂದು ||೨೬||

ನಡುಕಂ ಪೊದೞ್ದು ಕಡೆಗಾಲ್ಗಳಿಂ ಪರಿದು ನೀ |
ರ್ದೊಡಕಿಂ ಮಸುೞ್ದು ಬಿಡುಗಣ್ಗಳಿಂ ಪಿರಿದು ಕಂ |
ದಡಕಂ ನರಳ್ದು ಪಿಡಿಗೊರಲಿಂ ಕರೆದು ನುಡಿದನಣ್ಣ ಬಾರಣ್ಣ ದೇವ ||
ಪಿಡಿದೊಡಲಗಿನಿತು ದಿನವ್ರತದಿನಿರ್ದೊಡೆ ತನ್ನ |
ಪಡೆದ ಸುಕ್ಕೃತದ ಫಲಂ ತೀವಿದೊಡೆ ಸಹಜ ನೀಂ |
ನುಡಿದ ಮಾತಿಂಗೊದಗಿ ಬಂದೊಡಿಂದಿಗೆ ಧನ್ಯನಾದೆನೆಂದಂ ಭರತನು ||೨೭||

ಆವಗಂ ನಿನ್ನನಾರ್ ಬಗೆವನೆಯನೊತ್ತಿ ಸಂ |
ಭಾವಿಸುವ ತವಸಿಗಳ್ಗೊದಗದೀಯಡಿ ವನ್ಯ |
ಜೀವಿಗಳ್ಗೆಂದುಮಾಸರೆಯಾದುದೇಗಳುಂ ಪೆತ್ತವರ ಕಣ್ಗೊಡರದ ||
ದೇವ ನಿನ್ನಾಟಮಸುರರ್ಗೆ ತೋರ್ದುದು ನಿಚ್ಚ |
ಮಾವೇದವಚನಕೆಂತುಂ ಸಿಲ್ಕದಣ್ಣ ನೀ |
ನೇ ವಿಚಿತ್ರಮಿದಲ್ತೆ ತೊಡರಿ ಬಿೞ್ದು ಕೈಕೆಯೊರೆದ ಬಿಱುನುಡಿಯೊಂದಕೆ ||೨೮||

ಮಡದಿವೆಡುಗೈಯ್ಯೊತ್ತುವಡಿ ನಡೆಯೆ ಕಲ್ಲೊತ್ತಿ |
ದೆಡೆ, ಕಾಡ ಸುತ್ತೆ ಪೂದೋಂಟಮಂ ತಿರಿವ ಕಾ |
ಲುಡೆ ನಾರನೊಳ್ಪಟ್ಟೆಬಿಗಿವ ನಡು, ಪಟ್ಟಗೋಲೆಸೆವ ಕೈಯ್ಯೂಱುಗೋಲಂ ||
ಪಿಡಿಯೆ, ತಿರೆಸಿರಿವೊಱುವ ತೋಳ್ಮಡು ಬಗಲ್ಗಂಟಿ |
ಗೆಡೆಯಾಗಲಿಂತು ಪೊಸಸೊಗವ ನೀನುಂಡುದೇ |
ಕೊಡೆಯ ನಿನ್ನನುಭವಕೆ [ಸರಿಯೆ] ಮೇದಿನಿಯ [ಸೊಗಮದು] ರಾಘವ ||೨೯||

ಆಡಿದಂತಯ್ಯನಡವಿಗೆ ಪೋದುದರಿದಲ್ಲ |
ಕಾಡೊಳ್ ತೊೞಲ್ದುದತಿಶಯಮಲ್ಲ ರಕ್ಕಸರ |
ಕೂಡೆ ಕೈಗೈದುದಚ್ಚರಿಯಲ್ಲ ದೇವರ್ಕಳಿಂ ಪೊರೆಯೆ ದೊಡ್ಡಿತಲ್ಲ ||
ಖೋಡಿ ಘಾತಕಿ ಪಿಶುನನತಿಕೋಪಿ ಪಾಪಿ ಕುಲ |
ಗೇಡಿ ಭ್ರಾತೃದ್ರೋಹಿ ತನ್ನೊಳೊರೆದಂತೆ ಕಾ |
ಪಾಡಲಿಂತೈತಂದುದಿದುವೆ ಪಿರಿದೆಂದು ಕಾಲ್ಗೆಱಗಿದಂ ರಘುರಾಮಗೆ ||೩೦||

ಪಿಂಗದನುಜನ ಕಟಾಕ್ಷಿಸಿ ಭಕ್ತರಂ ನೋೞ್ಪ |
ಪಾಂಗದಿಂ, ಪಿಡಿದೆತ್ತಿ ತನ್ನನುಱೆ ಮಱೆವೊಕ್ಕ |
ರಿಂಗಭಯಮಂ ತೋರ್ಪಮರ್ದುಗೈಗಳಿ, ನಪ್ಪಿ ಸಿರಿಯನಪ್ಪುವ ತೋಳ್ಗಳಿಂ ||

ಅಂಗಸಂಗವನಿತ್ತು ನುಡಿಸಿದಂ ಬಟಿಕ ರಘು |
ಪುಂಗವಂ ಪ್ರಣವನವಮೂಲಸೂಕ್ತಿಗಳೊಗೆದ |
ಡಂಗಿ ನೆಲೆಗೊಂಡ ನಲ್ವಾಯಿಯಿಂದೆನೆ ಭರತನೇಂ ಕೃತಾರ್ಥನೊ ಧರೆಯೊಳು ||

ಸಹಜ ಕಂಡಿಲ್ಲಮೀರೇಬ್ಗಾಲ ವನದಿ ಕೇಳ್ |
ಸಹಜಮೀಬನ್ನಮೀಬೆದೆ ನಿನ್ನೊಲೊರ್ವಗಲ್ |
ಸಹ ಜಡೆಯ ಪೊತ್ತು ಕಿತ್ತಡಿಯೆಂಬೊಲುಣಿಸುಟಿದು ಸಿರಿತಿರೆಗಳಂ ಕಾಣದೆ ||
ದಹನಕೆಡೆಗ್ಮೆದೊಡಲ ಕಡುದುಗುಡಮಿನಿತು ಮಱೆ |
ದಹ ನಮಗೆ ಮೇಲ್ಬಯಸಿ ಬಂದೊಡಿಂತಾಸೆಗ್ಮೆ |
ದಹನವನಿಯೊಳಗಾವನ್ಮೆ ಭರತ ನಿನ್ನಂತೆ ಬಿಡುಬಿಡಿಂತೀನುಡಿಯುನು ||೩೨||

ತಮ್ಮ ಬಗೆಗನುರಾಗಮಿಂಬಾಗೆ ಬಟಿಕಣ್ಣ |
ತಮ್ಮಂದಿರೋರೊರ್ವರಂ ಬಿಡದೆ ನಡೆನೋಡು |
ತುಮ್ಮನಂ ದಣಿಯೆ ನಲ್ನುಡಿಯಿನೊಡಬಡಿಸೆ ರಾಘುವನನುಜನಂ ಭರತನು ||
ಸಮ್ಮತಿಸುತೆಡದ ಭೂಮಿಜೆಗೆಂದನೆಱಗಿ ಲೇ |
ಸಮ್ಮ ತನಗಾಗಿ ತೊಟಲಿದೆ ಕಾಂತನೊಡನೆ ಮನ |
ವಮ್ಮದಡವಿಯನಕಟ ! ಸಿಲ್ಕಿದೌ ರಕ್ಕಸರ ಕೋಟಲೆಗಿನಿತು ಸಾಲದೇ ||೩೩||

ಮೂರ್ವಟಿಯನುದ್ಧರಿಪದೇವಿ ನಿನಗೀಯೆಡರ್ |
ನೂರ್ವಗೆಯೊಳೊರೆಯಲಿಂತೊದವಿದತ್ತಕಟ ! ತ|
ನ್ನೊರ್ವನಿಂ ಪತಿಪರಾಯಣಿಗೆ ಸನ್ಮಂಗಳೆಗೆ ಸತ್ಯವಾಣಿಗ ಜಾಣೆಗೆ ||
ಉರ್ವರೆಯೊಳನಸೂಯೆಯಂತರುಂಧತಿಯಂತೆ |
ಪರ್ವೆ ಜಸವೆಲ್ಲೆಡೆಗೆ ನೋಯಿಸಿದೆನೌ ನಿಮ್ಮ |
ನಾರ್ವರ್ಪರೆಣೆಗೆ ತನ್ನಂ ಕಾವುದೆನೆ ಮೈದುನಂಗೆಂದಳವನಿಜಾತೆ ||೩೪||

ಬಸವಟಿದು ಮಱುಗದಿರ್ ನಿರ್ನೆರಂ ಭರತ, ನೋ |
ಯಿಸುವರಾರ್ ನೋವರಾರ್, ಬಗೆಯೆ ಮುಮ್ಮೆ ೖಮಾಟ |
ಬೆಸುಗೆ ಗಡ ! ಸುಖದುಃಖಮಿರದೆ ಪಗಲಿರುಳಂತೆ ಸಹಜಮಿದು ಪುಟ್ಟಿದರ್ಗೆ ||
ಬೆಸನಮಿಂತೆಮಗೆ ನಾಣ್ನುಡಿಗೆ ನಿನ್ನಿಂದೊದಗೆ |
ನಸಿನಸಿನಗೆಮ್ಮತ್ತಣಿಂ ತೋಱೆ ಲೋಕದಾ |
ಯಸಕೊರ್ವನೊರ್ವನಂ ದೂಱೆ ಮರುಳಾಗದೇಂ ಬಲ್ಲವರ್ಗೆಂದೊರೆದಳು ||

ಜಾಣೆ ಮಾರ್ನುಡಿಯಲುಸಿಕನೆ ಭರತನಿರ್ದು ತಾಂ ।
ಕಾಣಿಸಲ್ಕನುಜಗವನೆಱಗಿದೊಡವೆತ್ತಿ ಕೈ ।
ಮಾಣದಾಲಿಂಗನಂಗೆಯ್ದು ಕಣ್ಸೊಸರೆ ಮನ ಮಱುಗೆ ಪೇೞ್ದಂ ತನ್ನೊಳು ॥
ತೂಣಮನಗ್ಗೈದಡವಿಯಂ ಸಾರ್ದೊಡಂ ಪುರಕೆ ।
ಮೇಣೊರ್ವರ್ ಬರ್ಪ ಬಗೆಯಿಂದಾಯ್ತೆ ತಮ್ಮ ಹೋ ।
ನಾಣಱಿದನೆನ್ನ ಕಾಂಬಟ್ಟಿಯೇಂ ತೋರ್ದುದಣ್ಣನ ಸಾರ್ದ ವೀರನ್ನೈಸೆ ॥೩೬॥

ಘಟ್ಟನೈದಿದೆ ವಿಪಿನಕಣ್ಣನೊಡನುಱಿದು ಕೈ ।
ಗೊಟ್ಟರಸಿಯಂ ಮಱೆದು ಮಾತೆಯಂ ನಗರಮಂ ।
ಬಿಟ್ಟು ಸಿರಿ ಸೊಗಸದೊಡನಾಡಿಗರ ತೊಱೆದೆಣಿಸದಪ್ಪ ಸುಖಕಷ್ಟಗಳನು ॥
ಪುಟ್ಟಿತೆಂತು ವಿರಾಗವೆಲ್ಲದಱೊಳಾರಿದಂ ।
ನಟ್ಟರೊಡಲೊಳ್ ನಿನಗೆ ಪುರುಳಿಲ್ಲವೆಂದಂದು ।
ಪಟ್ಟಣದೊಳಿರಲಲ್ಲದೊಡೆ ಪುರಾಕೃತಯೋಗಬಲವೆ ಕೌಶಿಕನೊರೆದನೆ ॥೩೭॥

ನೋಂತುದಿಲ್ಲನುಜ ನಿನ್ನನಿತು ಪಿರ್ಮೆಯ್ಯೊಳ್ ನಿ ।
ರಂತರಂ ಸೇವಿಸುವೊಡಗ್ರಭವನಂ, ಮಾತಿ ।
ನಿಂ ತೋಱಿ ಪೇೞ್ದೊಡೇಂ, ರೂಪಡಿನೆಱಲ್ಮಾಡ್ಕೆ ನಿಮ್ಮಿರ್ವರೊಳ್ ತೋರ್ಪುದೈ॥
ಎಂತಟವಿಯಂ ತೊಱಲ್ದಿರಿ ತಾತನಾಣೆಗೆಯೊ ।
ಳೆಂತನಿಬರೊಳ್ ನೇಹಮಾಯ್ತು ಮೇಣಸುರರೊಡ ॥
ನೆಂತು ಕೈಗೈದಿರಚ್ಚರಿಯೆನಲ್ ಬರ್ದಿದಿರ್ ವೀರಾಗ್ರಗಣ್ಯರೆನಿಸಿ ॥೩೮॥

ನೀರ ಪೊಯ್ದೊಡನೆ ಪೋಪುದು ಕಾಷ್ಠಮದು ವಲಂ ।
ಸ್ವಾರಸ್ಯಮಱಿತಲ್ಲಿ ಲಘುವಿನಿಂ, ಕಿಱಿತನದಿ ।
ಸೇರಿದಂ ಸರಿದಣ್ಣನಂ ಪೆಱತು ಜಾಣ್ಮೆ ಮಗುಱತ್ತಣದು ಗಾಂಪನೆನಗೆ ॥
ಆರಿವನ ನೆಲೆಯಱಿತರುಂಟು ತೋರ್ಕೆಗೆ ನವ್ಮೊ ।
ಳಾರಣ್ಯಮಂ ಪೊಕ್ಕೊಡಂ ಮರಳಿ ನಿನ್ನ ಹೃದ ।
ಯಾರವಿಂದದೊಳಿಱಿದಡಂಗಿರ್ಪನಂ ಭರತ ನಿನಗಾದುದೀಜ್ಞಾನವು ॥೩೯॥

ಮೆರ್ವಾತಿನಿಂ ಸುಮಿತ್ರಾತ್ಮಜಂ ಮಣಿದಿಂತೆ ।
ನಲ್ವಿಚಾರಂಗೊಂಡನಂತಿರ್ದ ನಿವನೊಪ್ಪು ।
ವೊರ್ವ್ವಾನರನುಡಿಗ ತಲೆದೂಗಿದರ್ ಸಹೋದರರ ಬಗೆಗಾರ್ ಪೆರ್ಚ್ಚರ್ಕೈ ॥

ಸೊಲ್ಪಿಡಿದು ಕೇಳ್ ಮುನಿಪ ನಡೆನುಡಿಗಳಿಂ ಮನಂ |
ಸಲ್ವಿನಂ ಪಿರಿಯನಂ ಸೇವಿಸುವ ಸಹಜರಂ |
ಪೋಲ್ವರಾರ್ ಕಿಱಿಯರಂ ಸವಿನುಡಿಯಿನುಪಚರಿಸಿ ಪೊರೆವಗ್ರಜರನಿಳೆಯೊಳು ||

ಬೆನ್ನೊಳಾದೊಡೆಯು ಬಸಿಱುಂ ಪುಟ್ಟಿದಂತಱಿತು |
ಭಿನ್ನವೆಣಿಸದೆ ತಪ್ಪನೊಪ್ಪುಗೊಂಡೋವಿ ಸಂ |
ಪನ್ನರಂ ಮಾಡಿ ಗುಣಧರ್ಮದೊಳ್ ಬನ್ನಬೇನೆಗೆ ಮಱುಗಿ ನೆಱೆ ಪಾಲಿಸಿ ||
ತನ್ನೊಡನೆ ಕೂಟಕೂಟಕೆ ಕರೆದು ದಣಿದು ಬ |
ರ್ಪನ್ನೆಗಂ ಸಾಸಮಂ ಪೊಗಟಿ ಸರಿಗಜ್ಜದೊಳ್ |
ಮುನ್ನವರೊಳಾಲೋಚನೆಯನೆಸಗಿ ತಮ್ಮಂದಿರಂ ಕಾಣ್ಬನೇಂ ಪೂಜ್ಯನೋ ||

ಪೆಂಡತಿಯ ನುಡಿಗೇಳ್ದು ಬಾಯ್ಗೊಬ್ಬಿನಿಂ ಬೈದು |
ದಂಡಿಸಿ ಪೆಱರ್ಗೊರೆದು ಚಾಡಿಯಂ ಕೇಡೆಣಿಸಿ |
ಬೆಂಡಪ್ಪಿನಿಂ ದಣಿಸಿ ಕೂಟಿಕ್ಕದಟ್ಟಿ ಸೋದರರ ಬಸಿಱುರಿಸಲವನು ||
ಕೊಂಡಬ್ಬೆಗಬ್ಬದಿಂ ಪೊಱಟುದಕೆ ಮೇಣ್ ಕರುಳ್ |
ತುಂಡಾಗಿ ಬಂದುದಕೆ ದೇವಸಿಂ ಚೊಚ್ಚಲಿಗೆ |
ಗಂಡೆನಿಸಿ ಪುಟ್ಟಿತಕೆ ಪಿರಿಯನೆನಿಸಿದಕೊಳ್ಕಿತಾಯ್ತಲ್ತೆ ಧಾತ್ರಿಯೊಳಗೆ ||೪೨||

ಅಂತದಱಿನೊರ್ವನಗ್ರಜನೆನಿಸಿ ಪುಟ್ಟಿ ವಿಧಿ |
ಯಿಂ ತನ್ನ ಪೊರ್ದುಗೆಯ ಹಂಗನುಱೆ ಸಲಿಸಿ ಬಗೆ |
ಮುಂತಱಿತು ಸಹಜರಂ ಪೊರೆವೊಡೆ ಗುಣಂ ಪೂರ್ವಸುಕೃತಿಗಲ್ಲದೆ ಬರ್ಪುದೇ ||
ಎಂತೆಣಿಸಿ ಪೊರೆದೊಡಂ ದೂಱು ನೆರೆಪೊರೆಯೊಳು ಸ |
ಮಂತವರ ಕೆಡಕುನುಡಿಗಣ್ಣನೊಳ್ ಪೊಯ್ದಾಡು |
ವಿಂತಹ ಸಹೋದರರ್ಗೇನೆಂಬೆ ವಂಶಕಂಟಕರಲ್ತೆ ಕೂಡಿ ಜನಿಸಿ ||೪೩||

ಮನೆಗೆಲಸಮಂ ತೊಱೆದು ಕಂಡಕಂಡೆಡೆ ತಿರಿದು |
ದಿನಗಳೆದು ದುರ್ವ್ಯಸನದಿಂ ಪಿರಿಯಹೊಣೆಯಂ |
ನೆನೆದು ಸರಿಹಸುಗೆಗುಱೆ ಪುರುಡಿ ಬೇಗುದಿಗುದಿದವನ ಸಿರಿಗೆ ಬಲ್ಮೆಯಿಂದಾ ||
ತನ ತಪ್ಪ ಬಗೆಯೊಳಟ್ಟುಳಿಗೆಯ್ದು ಸಾರ್ದನ್ನ |
ರನೆ ನಚ್ಚಿ ಬಱಿದೆ ಪಗೆಗೊಂಡಣ್ಣನಂ ನೋಯಿ |
ಪನುಜರ್ಗೆ ಗುರುದೇವರೊಲ್ಮೆಯಪ್ಪುದೆ ತಪ್ಪದೆಂದೆಂದಿಗುಂ ನರಕವು ||೪೪||

ಪಿರಿಯನಂ ಪಿತನಂತೆ ಬಗೆದಕ್ಕಱಿಂ ಗುಣಂ ।
ಪೊರೆಯೆ ಭಯಭಕ್ತಿಯಿಂ ಸೇವಿಸುತೆ ವೇಳೆಯುಳ ।
ವಱಿತು ನುಡಿದುತ್ತರಕೆ ಮಾರ್ನುಡಿಯುದೊಪ್ಪಿ ತಲೆವಾಗಿರ್ಪುದುಚಿತಮಂತು ॥
ಮಱೆದಾದೊಡಂ ಪುಸಿಯನುಸಿರದೊರ್ಕಟ್ಟಿನಿಂ ।
ಪರರಿಗೆಡೆಗೊಡದಿರ್ಪನಂ ಸೇರ್ದುದ ಕಣ್ಗೋಟ ।
ದಿರವಿನೋಲ್ ಪೊಂದಿರಲ್ಕವನೆ ಪಾವನನೇಕೆ ಪಲಬರೊರ್ವರ್ಗಂ ಸಾಲದೇ ॥೪೫॥

ಪುಟ್ಟಿ ಬಸಿಱೊಳ್ ಪಿರಿಯನಾದಬ್ಬೆಗುಂಡು ಬಾ ।
ಯ್ಗೊಟ್ಟವಂ ಸವಿದ ಮೊಲೆಯುಂ ಪಟ್ಟು ಮೇಣವನ ।
ತೊಟ್ಟಿಲೊಳ್ ಪರಿದವಂ ನಡೆದೆಡೆಯೊಳಾಡಿ ಬಳೆದವನಂತೆ ಮಾತುಗಲಿತು ॥
ಒಟ್ಟಿನಿಂ ಬಿಜ್ಜೆಬಿನ್ನಣವಱಿತು ತನ್ನಣ್ಣ ।
ಗಟ್ಟುಳಿಯನೆಸಗುವನೆ ಸೋದರಂ ತಪ್ಪು ಮುಂ ।
ಬಟ್ಟೆವೆರ್ಗೆಯ್ದೊಡಂ ಮಱೆದು ಕಾಣ್ಬನೆ ಪಿರಿಯನೆಳೆಯೊಳ್ನೆಗಪ್ಪೆವಡೆದು ॥೪೬॥

ಮೇಲೆ ಸೀತಾರಾಮಲಕ್ಷ್ಮಣರ್ ಭರತನಂ ।
ಲಾಲಿಸಿ ಪೊರೆದು ಮಣಿದು ಸಂತೈಸಿ ಬಟಿಕ ಮುನಿ ।
ಪಾಲ ಕೇಳ್ ಗುರುವಸಿಷ್ಠಂಗೆಱಗಿದೊಡೆ ಪರಸಿ ಮೂವರಂ ಪಿಡಿದೆತ್ತುತ ॥
ಸಾಲದೇ ನರನಾಟಕದೊಳಸುರರಂ ಗೆಲ್ದ ।
ಲೀಲೆ ಭೂಮಿಜೆಯೆನಿಸಿ ಪತಿಭಕ್ತಿಯುಂ ತೋರ್ದ ।
ಶೀಲ ಪೊಱೆಗಳ್ಕಿ ಸೋದರನಾಗಿ ಪುಟ್ಟಿ ನೆರವಾದ ಸಾಹಸವೆಂದನು ॥೪೭॥

ಪ್ರಚುರಮುನಿನಾಥನಿಂತೆನಲುಪಚರಿಸಿ ವೃದ್ಧ ।
ಸಚಿವನಂ ಕೂರ್ಮೆಯಿಂ ನುಡಿಸಿ ಕುಶಲವ ಕೇಳ್ದು ।
ಸಚರಾಚರಾತ್ಮಕಂ ಪ್ರಜೆಗಳಂ ಮುಂತಿರ್ಪರಂ ಕಟಾಕ್ಷಿಸಿ ತನ್ನೊಳು ॥
ಉಚಿತಮಲ್ಲಿರ್ಪುದಬ್ಬೆಯ ಕಾಣದಿನ್ನು ಕಪಿ ।
ನಿಚಯುದೊಡನ್ನೆದುವೆಂ ಪುರಕೆಂದು ಭರತಂಗೆ ।
ವಚಿಸಿದೊಡೆ ಮಂತ್ರಿಸುಮುಖನನಟ್ಟಿದಂ ಮುಂದೆ ಸಿಂಗರಂಗೆಯ್ವುದೆಂದು ॥೪೮॥

ತನ್ನೊಡೆಯನಾಣೆಯಿಂ ಪುರಕೆ ಸುಮುಖಂ ಬರ್ಪ ।
ಮುನ್ನಮೀವಾರ್ತೆ ಪರಿದತ್ತಯೋಧ್ಯೆಗೆ ನಾಡು ।
ಚೆನ್ನಪ್ಪಿನಂ ಸಿಂಗರಂಗೆಯ್ವರೇಂ ಪೌರಜನರ ಭಕ್ತಿಯೊ ದೊರೆಯೊಳು ॥

ಪೊನ್ನೆಲಂ ನೆಲದ ಕೆಲಬಲದಿ ಪಟ್ಟಿಸೆ ನಿಂದ |
ರನ್ನಗಂಬಂ ಕಂಬಗಳ ಮೇಲೆ ಬಿಗಿದಿಹ ಸ |
ಮುನ್ನತಮಹಾಮಂಡಪಂ ಮಂಡಪಂಗಳಿಂ ಬೀದಿಗಳ್ ಚೆಲ್ವಾದುವು ||೪೯||

ಉಪ್ಪರಂ ಕಣ್ಗೆಸೆವ ಪಚ್ಚೆಜಂತಿಯ ಮೇಲೆ |
ಚಪ್ಪರದ ನೀಲವಲಗೆಯ ಕಬ್ಬೊಳೆಪನಟಿಸ |
ಲಿಪ್ಪುವೆನೆ ತೋಱಬಜ್ಜರರನ್ನಬುರುಡೆಗಳ್ ಸಾಲ್ಗೊಂಡುವೆಡೆಯೆಡೆಯೊಳು ||
ಮುಪ್ಪುರಿಯ ಪವಳಮಾಲೆಗಳ ಬಟಿವಟಿಯೊಳೊಡ |
ನೊಪ್ಪುಗೊಂಡಾಣಿಮುತ್ತುಗಳ ಝಲ್ಲರಿಯ ಮನೆ |
ದಪ್ಪದೋರಣದ ಮಣಿಮಂಡಪಂ ಕಣ್ಗೆ ಕೌತುಕಮಾದುದಾನಾಡೊಳು ||೫೦||

ಸಲ್ಲಲಿತರಾಜವೀಥಿಗಳೊಳಿರ್ಕಡೆಮನೆಗ |
ಳೆಲ್ಲೆಡೆಯ ಮಕರತೋರಣವೊಪ್ಪಿದತ್ತು ಸಿರಿ |
ಬಲ್ಲಹನ ಕೂರ್ಮೆಗಡಲೊಡೆಯೆ ನೆಱೆಗಿಟ್ಟು ಬಿಡುಗಂಡಿಗಳೆನಲ್ಕೆ ನಡುವೆ ||
ಅಲ್ಲಿಗಲ್ಲಿಗೆ ಮುತ್ತುಮಣಿಯಿಂ ಬರೆದ ರಂಗ |
ವಲ್ಲಿ ಪೊನ್ನೆಲದಿ ನಾಡರಸಿ ಬರ್ಪೊಡೆಯಂಗೆ |
ಮೆಲ್ಲಡಿಗೆ ಪಾಸಿಕ್ಕಿದುಟ್ಟ ಪೊಂಬಟ್ಟೆಸೆಱಗಿನ ಜರಿಯೊಲೆಸೆದಿರ್ದುದು ||೫೧||

ಅಂತರದೊಳಿರ್ಪ ಪೊಸಕುರುಜು ಕಣ್ಗೊಂಡುದು ವ |
ಸಂತರಾಜಂ ಸರ್ವಫಲಗಳಂ ಕೂಡಿ ನಲ |
ವಾಂತು ರಾಘವನ ಕಾಣ್ಕೆಗೆ ಕಟ್ಟಿಸಿದ ಚೈತ್ರರಥಮೆನಲ್ ಫಲಭಾರದಿ ||
ಮುಂತೆ ಮೊಗವಾಡದಿರ್ಕೆಲದ ಪೂಸರದ ತಳಿ |
ರಿಂ ತುಱುಗಿ ತೋರ್ಪ ತೋರಣದ ಸಾಲ್ಪಿಡಿದು ನೇ |
ಲ್ವಂತೆ ಸರಿಗೊಂಡ ಮೆದುವಳ್ಳಿಗಳ ಶೋಭೆಯಿಂ ಪುರವೀಥಿಯೊಳ್ ಪೊಸತೆನೆ||೫೨||

ಚೆಚ್ಚರಂ ಬರೆ ನಾಡ ಸಿಂಗರಕೆ ಸುಮುಖದಣಿ |
ಯಚ್ಚರಿರ್ಯಗೊಂಡವರ ರಾಜಭಕ್ತಿಗೆ ಮನಂ |
ಮೆಚ್ಚಿ ಮೇಲಪ್ಪ ಸನ್ನೆಯಮೆಸಗಿ ಕಾದಿರ್ದರೆಲ್ಲೆಲ್ಲಿಯುಂ ಪುರದೊಳು ||
ಪೆಚ್ಚಿದತ್ತೊಸಗೆ ವಾತ್ಸ್ಯಾಯನಮುನೀಶ ಮುಂ |
ದೆಚ್ಚಱಿರ್ ಪೇಟ್ದುದಕೆ ನಾಡುಗರ್ ಪೊಱಟು ಕಾ |
ಡ್ಪೊಚ್ಚದೋಲ್ ನೆಱೆದಿಱಿಂಪೆಯ ಹಂತಿಯೆನಲಿದಿರ್ಗೊಳಲ್ಕೈದಿದಮರ್ುಂದಕೆ||೫೩

ಇತ್ತಲನಿತಱೊಳಖಿಳರಿಂ ಕೂಡಿ ರಾಘವಂ ।
ಪತ್ತಿ ಪುಷ್ಪಕದೊಳ್ಕೈತರುತಿರಲಯೋಧ್ಯೆ ತೋ ।
ರ್ದತ್ತಂದು ಶರಣನಭಿಷೇಕಸಮಯಕೆ ಸಿಂಗರಂಗೊಂಡ ಲಂಕೆಯಂತೆ ॥
ಹತ್ತಿರಕೆ ಬರೆವರೆ ಪುರದ್ವಾರದೊಳಗೆ ಗೆಲ ।
ವೆತ್ತು ಸೂದ್ಯೈಪ ಬಹುವಾದ್ಯಘೋಷಮಿದಲ್ಲಿ ।
ಮತ್ತವನ ಕಳಿಪಲೊದವಿದ ವಿಭೀಷಣನಧಿಕವಾದ್ಯಘೋಷದೊಲಾದುದು ॥೫೪॥

ಒಂದೆಡೆಗೆ ಕೊಂಬು ಪೆಗ್ಗಾಳೆ ಕುಡುವಳೆ ಸಂಕ ।
ವೊಂದೆಡೆಗೆ ಭೇರಿ ತಂಬಟೆ ಡಕ್ಕೆ ಪರಿಗೆ ಡೋ ।
ಲೊಂದೆಡೆಗೆ ತಾಳ ಮದ್ದಳೆ ಗಂಟೆಯೊಂದೆಡೆ ಕೊಳಲ್ ಮೌರಿ ಸುತಿ ಮಗುಟ್ದು ॥
ಒಂದೆಡೆಗೆ ವೀಣೆ ಸಾರಂಗಿ ತಂಬುರಿಯಿಂತು ।
ಸಂದಣಿಸಿ ಪೂರ್ಯೆಸೆ ಪೊಣ್ಮೆಗೆನಲ್ ಗಗನಕೆಂ ।
ಟುಂ ದೆಸೆಗೆ ಗಜದ ಬೃಂಹಿತಮೆನಲ್ ಪುದಿದುದರ್ಣವಕೆ ಪೆರ್ಮೊಱೆಯೆನಲ್ಕೆ ॥

ಅಟ್ಟಿಯಿಂ ಪಥವಿಡಿದು ಬರ್ಪ ಬಂದಟ್ಕಱಿಂ ।
ನರ್ತಿಪ ನಲಿದು ಕೂಡಿ ಕೀರ್ತಿಪ ಸಮಂತು ಸಂ ।
ಕೀರ್ತಿಸಿ ಮನಂಗೊಳ್ವ ಮನಗೊಂಡು ಕಾಣ್ಬ ಕಂಡೆತ್ತಲುಂ ಸುತ್ತುವರಿವ ॥
ಕೂರ್ತು ಪರಿದೆಣೆಯರಂ ಸೇರ್ವ ಸೇರ್ದವರೊಡನೆ ।
ದಿರ್ರಿರುಗಿ ಪೋಪ ಪೋಗಿತ್ತ ಬಹ ನೋಡೆಂದು ।
ವರ್ತಮಾನವನೊರೆವ ಪುರಜನರ್ ಕಣ್ಗೆ ಗೋಚರಮಾದರಾರಾಮಗೆ ॥೫೬॥

ಮುಂದೆ ನಾರುಡೆಯಿನೆಳೆವಾಸಿನಿಂ ಪೆರ್ಜಡೆಯಿ ।
ನೊಂದುಣಿಸಿನಿಂ ನೋಂತ ಪಾರ್ವ ಬಳಗಂ, ಮನಂ ।
ಗುಂದಿ ಸಿಂಗರಬೇಂಟೆಯುಡಗುಬಿಲ್ಗಣೆಗಳಂ ತೊಱೆದ ರಾಜನ್ಯನಿವಹಂ ॥
ಸಂದ ಭಕ್ತಿಯೊಳೆ ಬೇರವನುಟಿದ ಬೇರಿಗರ ।
ವೃಂದಮಟಲಿಂ ಮೋಲವರ ಸೇವೆಗೆಯ್ದು ಪೋ ।
ದಂದಿನಿಂ ಬಾಟ್ದು ಪಾದಜನಿಚಯಮಂದು ಕಾಣಿಸಿತು ರಕ್ಕಸವಗೆಯಗೆ ॥೫೭॥

ನೆಲನ ಸೋಂಕಲ್ ವೇಗಮುಡುಗಿ ಪೋಣ್ ಪುಷ್ಪಕಂ ।
ಮಲಯಜದ ಕಂಪುವೊಱೆಯಾಂತು ನಡೆತರ್ಪ ಮೆ ।
ಲ್ಲೆಲರ ಗತಿಯಂತೆವೋಲ್ ಮಂದಗತಿಯಿಂ ಪರಿದು ಸಕಲರೊಡನಾರಾಮನು ॥

ಕೆಲಕಿಟಿದು ಬಂದನನಿತಱೊಳೆ ಭೂದೇವಸಂ ।
ಕುಲವೇದಘೋಷಮತಿಶಯಮಾಗೆ ಜಯರವಂ ।
ಸಲೆ ಪೆರ್ಚೆ ಸುರರ ಬಿನ್ನಪದೊಳೇಱಿದನರಸಿಯೊಡನೆ ಪೊನ್ನಂದಣವನು ॥೫೮॥

ಸುತ್ತಿರಲ್ ಕಪಿವರರ್ ಮಾಗಧರ್ ಮುಂದೆ ಕೈ ।
ಯೆತ್ತಿ ಪೊಗೞುತ್ತಿರಲ್ ಸಹಜರೆಡಬಲದಿ ಬೀ ।
ಸುತ್ತಿರಲ್ ಚೌರಿಯಂ ವಿಪ್ರಗಡಣಂ ವೇದಸೂಕ್ತದಿಂ ಸ್ತುತಿಸಿ ಬರಲು॥
ಮುತ್ತಿರಲ್ ಪೌರಜನರೆಲ್ಲೆಡೆಯೊಳಲ್ಲಲ್ಲಿ ।
ವೃತ್ತಕುಚೆಯರ್ ಬೆಳಗುತಿರಲಾರತಿಯ ಮುಂದೆ ।
ಕೆತ್ತುಕೊಂಡಿರಲಧಿಕವಾದ್ಯರವವೆಸೆದನಂದಣದಿ ಸೀತಾರಾಮನು ॥೫೯॥

ಮಣಿವ ಬಲವರ್ಪ ಪಾಡುವ ನೋಡುವಾಸೆಯಿಂ ।
ಕುಣಿವ ಪರಸುವ ಸೇವೆಗೆಯ್ವ ನುಡಿಸುವ ಬವಣಿ ।
ಯೆಣಿಸಿ ಮಱುಗುವ ಸಂತಸಂಗೊಳ್ವ ಪೊಸಬಿನದಮಂ ತೋರ್ಪ ಮೌನಮಿರ್ಪ ॥
ಆಣಿಯರಂ ಫಲಕುಸುಮಗಳ ಸಮರ್ಪಿಸುವ ಬೆಲೆ ।
ವಣಿಗಳಂ ಕಾಣ್ಕೆಗಳನೀವ ಜನರೊಡನೆ ಮೆಱೆ ।
ವಣಿಗೆಯಿಂ ರಾಜವೀಧಿಯೊಳಟ್ಟಿಯಿಂ ರಾಘವಂ ಮುಂದೆ ಬರುತಿರ್ದನು ॥೬೦॥

ಮುಗಿಲಟ್ಟಣೆಯೊಳಿರ್ದು ಮುಕ್ತಾಫಲಂಗಳಂ ।
ಗಗನದಿಂ ಸುರಿವರಚ್ಚರಸಿಯರೆನೆ ಬಾಲೆಯರ್ ।
ಮಿಗಿಲೆಡ್ಡಮಪ್ಪ ಪೇರಾನೆಗಳನೇರ್ದು ಸೇಸೆಯನಿಕ್ಕಿ ನೋೞ್ಪರಲ್ಲಿ ॥
ಉಗುವ ಮದಧಾರೆಯಿಂ ಮುತ್ತೆವರ್ಪಳಿಗಳೊಡ ।
ನೆಗೆದು ವ್ಯೋಗಂಪಿಗವರಂ ಬಳಸೆ ಮಿಱಳಿಸುವ ।
ಬಗೆಗೆ ಕೈದಿರುಹಿ ಕಣ್ಗೊನೆಯಾಡಿ ಬೆಡಗಿನಿಂ ನರಯಾನದಿರ್ಕಡೆಯೊಳು ॥೬೧॥

ಸಾಲಿನುಪ್ಪರಿಗೆಯಂ ಸಾರ್ದು ಕಟ್ಟೞ್ಕಱಿಂ ।
ಲೋಲಾಕ್ಷಿಯರ್ ಭಗಣಮಧ್ಯದೊಳ್ ರೋಹಿಣೀ ।
ಬಾಲಚಂದ್ರಮರಂತೆ ಮೆಱೆವ ಸೀತಾರಾಮರಂ ಪೌರಜನರ ನಡುವೆ ॥
ಆಲಸುತ ತವ್ಮೊಳೆತ್ತಣ ಕೋಮಲಾಂಗಂ ವಿ ।
ಶಾಲನೇತ್ರಂ ಹಸನ್ಮುಖಮಧಿಕಸೌಂದರ್ಯ ।
ಮಾಲೋಕಕತಿಶಯಮಿವರ್ಗೆಂದು ಬಾಯ್ದೆಣೆಯೆ ಪೊಗೞದರ್ ಬೆಗಡುಗೊಂಡು ॥

ಕುಲಮಂ ಸುಶೀಲಮಂ ಸೌಂದರ್ಯಮಂ ಬಾಹು |
ಬಲಮಂ ವಿವೇಕಮಂ ಕೌಮಾರಮಂ ನಿಜೋ |
ಜ್ಜ್ವಲಶೌರ್ಯಮಂಭೂತದಯೆಯಂಪ್ರಭಾವಮಂ ಗುರುಭಕ್ತಿಯಂನಿಷ್ಠೆಯಂ ||
ಎಲೆ ಭಗಿನಿ ರಾಘವನೊಳಿನಿತೆಣಿಸದಾತನ್ನ |
ಧಲವಿಡಿದು ನಗರದಿಂ ಪೊರಡಿಸಿದ ಪಾಪಿ ಭೂ |
ತಲದಿ ಕೈಕೆಯೆ ಕೈಕೆ ಪೆಣ್ಗಳೊಳಗೆಂದು ಸುಯ್ದೊರ್ವರೊರ್ವಳ್ಗೆಂದಳು ||೬೩||

ದಾರಿಯೊಳ್ ಹರ್ಮ್ಯಾಗ್ರದೊಳ್ ನಿಂತು ನೋಟ್ಟ ಪುರ |
ನಾರಿಯರ ಸಲ್ಲಾಪಮಂ ಕಂಡು ಮಣಿವ ಪರಿ |
ವಾರಮಂ ಕರುಣಿಸಿ ಸಮಸ್ತವಿಪ್ರಸ್ತೋಮಮಂ ಕಟಾಕ್ಷಿಸಿ ತನ್ನನು ||
ಸಾರಿ ಬಹ ಸಾವಂತರಾಯರಂ ಮನ್ನಿಸಿ ವಿ |
ಚಾರಿಸಿ ಜಘನ್ಯಜರನಂತ್ಯಜರ ಸೇವೆಯಂ |
ವೀರರಾಘವನೊಪ್ಪಿ ಸೋದರರ್ವೆರಸು ಕಪಿನಿಚಯದೊಡನೈತಂದನು ||೬೪||

ಪಡೆದನಂ ಕಂಡಂತೆ ಭರತನೊಂದೂರ್ಗೆ ಪೋ |
ದೊಡೆಯನಂ ಕಂಡಂತೆ ನೀಱೆಯರ್ ದ್ವಿಜರಲ |
ರ್ದೊಡೆಯನಂ ಕಂಡಂತೆ ದಿಗ್ವಿಜಯವೆಸಗಿ ಬರ್ಪರಸನಂ ಕಂಡಂತಿರೆ ||
ನಡೆತರ್ಪ ಮಿಕ್ಕುಟಿದವರ್ ಕಂಡು ಸಂತಸದ |
ಕಡಲೊಳಟ್ಟಿರೆ ದೇವತತಿ ಪೊಗಟೆ ಗಾಡಿಯಿಂ |
ದುಡುಪಪುರದೊಡೆಯ ಲಕ್ಷ್ಮೀಮನೋಹರನೊಡನೆ ನಿಜನಗರಿಯಂ ಪೊಕ್ಕನು ||

ಇಂತು ಶ್ರೀರಾಮಪಟ್ಟಾಭಿಷೇಕದೊಳ್ ನಾಲ್ಕನೆಯ ಸಂಧಿ
ಮುಗಿದುದು.

# ಐದನೆಯ ಸಂಧಿ.

ಸೂಚನೆ ॥ ಮಾರ್ತಂಡಕುಲಲಲಾಮಂ ರಾಘವಂಗೆ ಸುಮು ।
ಹೂರ್ತದೊಳ್ ಪಟ್ಟಾಭಿಷೇಕಮಾಯ್ತಾನಂದ ।
ಪೂರ್ತಿಯಿಂ ನಿರ್ಜರರ್ ತಮಗೊಡರ್ಚಿದ ಸುಖಕೆ ಪೊಗೞಲ್ ಕೃತಜ್ಞರಾಗಿ ॥

ಮುಂಗತೆಯನೊರೆವೆನಾಲಿಸುವುದೆಲೆ ಮುನಿಕುಲೋ ।
ತ್ತುಂಗ ವಾತ್ಸ್ಯಾಯನನೆ ಬರುತಿರ್ದನಾಗ ರಘು ।
ಪುಂಗವಂ ಸಕಲರೊಡನರಮನೆಗೆ ಬೞಿಕಿತ್ತಲಂಬೆ ಕೌಸಲ್ಯೆ ಸುತನಾ ॥
ಸಂಗತಿಯನಱಿಯದೆಣಿಕೆಯೊಳೇಗಳುಂ ಮನ ಕ ।
ರಂಗಿ ಪೂಮುಱಿದ ತಾವರೆವಳ್ಳಿವೋಲ್ ಬಾಡಿ ।
ತಂಗೆಯಂಬೈದುವಿಧಿಯಂಜಱೆದು ಭೋಜನಂದೊಱೆದುಮೈಮಱೆದುಮೊರೆದು ॥

ಪಿಂದೆ ಬಲ್ನೋಂಪೆಸಗಲಂತದಱಿನಾಮುದ್ದು ।
ಕಂದನಂ ಪಡೆದೆ ಗಡ! ಮೈಯಿದಱೊಳೇಂ ಪಾಪ ।
ಮಂ ದುಡಿದೆನೋ ಮಾಯವಾದನಣುಗಂ ಕೈಗಮರ್ದ ಮಣಿಯುಡುಗಿದಂತೆ ॥
ಎಂದಿಗೆ ಮಗುೞ್ದೆನ್ನ ಕಣ್ಜಕ್ಕವಕ್ಕಿಯಾ ।
ನಂದಿಪುದೊ ರಾಮಚಂದ್ರನ ಕಂಡೆನುತ್ತುಮೆಳೆ ।
ಗಂದಿಪಸು ಕಣ್ಮಱೆಯ ಕಱುವನಾರೈವಂತೆ ಹಂಬಲಿಸುತಿರ್ದಳಿಂತು ॥೨॥

ಸಖಿಯರಿಂದಱಿತು ದೇವಿಯರಿರವನಾಗಳ್ ಸು।
ಮುಖನೊಯ್ಯನೈದಿ ಕಂಡೆೞಗಿ ಪೇೞ್ದಂ ತಾಯೆ ।
ಮಖರಕ್ಷಕಂ ಜಾನಕೀವಲ್ಲಭಂ ಪಿತೃವಚನಪಾಲನಿಂದ್ರಜಾರಿ ॥
ನಿಖಿಲಮರ್ಕಟನುತಂ ಖರಕುಂಭಕರ್ಣಪ್ರ ।
ಮುಖದಾನವಾಂತಕಂ ಶರಣಾರ್ಥಿತಪ್ರದಂ ।
ಸುಖದೊಳೈತಂದನನುಜಂಬೆರಸು ಸತಿಸಹಿತಮಿದೆಕೊ ನೋಡೇೞ್ವುದೆಂದು ॥೩॥

ನುಡಿಗಬಲೆ ತಾನೆದ್ದು ಬಯಕೆ ಪಿರಿದಾಗಲಡಿ ।
ಗಡಿಗವನೊಳಾರೈದು ವಾರ್ತೆಯಂ ರೋಮಾಂಚ ।
ಮೊಡನೆ ತಲೆದೋಱಿ ಮೆಯ್ತ್ರಯೋಱೆ ಸಂತಸದ ಕಂಬನಿ ಪೇಱೆ ಮೋರೆಯರಳೆ ॥
ಕಡೆವಗಲ ಜಾದಿಮಲ್ಲಿಗೆಯಂತೆ ನಸುನಸುಂ ।
ಪೆಡಮೆಟ್ಟೆ ದುಗುಡಮರುಣೋದಯದ ಮರ್ಬಿನೋಲ್ ।
ಕಡುತವಕದಿಂ ನಿರೀಕ್ಷಿಸುತಿರ್ದಳಾತ್ಮಜನ ಬರವನಿತ್ತಲ್ ರಾಮನು ॥೪॥

ದಂಡಿಗೆಯನೇರ್ದು ಬರೆ ಕೈಕೆಯರಮನೆಗಿದಿ |
ರ್ಕಂಡಿಟಿದು ಪೊಕ್ಕೊಳಗೆ ಮಣಿಮುಗುಡಗದಿರ್ವಗಲ್ |
ಕಂಡ ಪೊಳಪಿಂ ಬೆಳಗುವಡಿದಾವರೆಗೆ ಪುರುಡಿ ಕೊರೆಗೆ ಕಣ್ಣ್ ೖದಿಲಿಂತು ||
ದುಂಡುವೊಗಸಸಿ ಕಂಡು ಕಂದಿತೆನೆ ತಾಯಡಿಗೆ |
ಮಂಡೆಯಂ ಬಾಗಿರ್ದೊಡಂ ಕಣ್ಮಲರ್ಗಳಿಟಿ |
ಗೊಂಡು ಬಾಡಿರಲಬಲೆ ನುಡಿಸದಿನಿಸುಂ ನೋಡದಿರ್ದಳತಿಲಜ್ಜೆಯಿಂದ ||೫||

ಮಾತನಾಡಿಸದಿರಲ್ ಕೈಕೆ ಬಱಿಕೆಂದನೆಲೆ |
ಮಾತೆ ನಿನ್ನಾಜ್ಞೆಯಂ ಮೀರ್ದನಲ್ಲಿನ್ನೆವರ |
ಮಾತೆಱದೆ ಮುಂದೆಂದುಮೆಂದಿಗುಂ ನಡೆಯದಿರ್ಪೆಂ ಸಿದ್ಧಮಂತಲ್ಲದೆ ||
ನೂತನಂಬೇಡ್ಪೆನೆಂದೆಣಿಸದಿರ್ ನಿನ್ನಾತ್ಮ |
ಜಾತನೆಂದೇ ಬಗೆದು ಬಾಲಬುದ್ಧಿಯೊಳೆಂತು |
ನಾ ತಿಳಿಯದೆನ್ನವಗುಣಂಗಳಿರೆ ಮಱೆದು ಪಾಲಿಪ್ಪುದಿಂತಿಂತಿರಲ್ಕೆ || ||೬||

ಸೆಱಗೆಯ್ದುದೇನೌ ಕರಾಬ್ಜಮಿಾಗಲ್ಲಮೆಂ |
ಬರೆವೆಱೆಯನಕ್ಷಿನೀಲೋತ್ಪಲಂ ಪಾದನಖ |
ಕಿರಣರವಿರುಚಿಯನೇಂ ಪಗೆದು ಕಾಣ್ಬುದು ಕಂಬುಕಂಧರಂ ಬಾಹುಬಿಸದಿ ||
ಒಱಗಿರ್ಪುದೇಕೆ ನಾಸಿಕಚಂಪಕಸುಮುಕುಳ |
ಮರಳಿ ಮುಗಿದಪುದೇಕೆ ಸುಯ್ಬುಸುಪಿನಿಂ ಕುರು |
ಳ್ಗಿಱುಮುಗಿಲ್ ನಿಟಿಲಾಂಬರದಿ ಕೆದರ್ದಿರ್ಪುದೇತಕೆ ನಿಜಂಬೇಱ ಮಾತೆ ||೭||

ಕತ್ತುರಿಕರಂಡಬಾಯ್ಮನೆಯೊಳಗೆ ದಾಳಿಂಬ |
ವಿತ್ತುವಲ್ಗಾಪಿಟ್ಟು ತೊಂಡೆವಣ್ದುಟಿದೆಱೆಯ |
ನೆತ್ತಲುಂ ಬಿಗಿದು ಮುತ್ತುಗದಳಿನಾರ್ಲಗೆವಣಿಯೊಳಿರ್ದು ಬಾಸೆವೆಣ್ಣು ||
ಮತ್ತೇನನೆಸಗಿದಪಳಿನಿಯನಾಲೋಕದಿಂ |
ದಿತ್ತಲೈತಂದೊಡನೆ ನೆಲಸಿರ್ಪುದೆಂದೇಕ |
ಚಿತ್ತದಿಂ ಮೌನಗೊಂಡಭವನಂ ಧ್ಯಾನಿಪಳೆ ವ್ರತವೆನಿತು ಪೊತ್ತಿರ್ಪುದು ||೮||

ನೋಡುನೋಡೌ ಭರತ ನಿನ್ನಣುಗನೆಱಗಿದಪ |
ನಾಡಬಾರದೆ ಪರಸಿ ಹಿತವಚನಮಂ ಮುಂದೆ |
ಜೋಡಿಸಿರ್ಪಂ ಕರವನೆಳೆಯನೀಲಕ್ಷ್ಮಣಂ ಕುಳ್ಳಿರಲುಸಿರಬಾರದೇ ||

ಕಾಡಂ ತೊಱಲ್ದು ಬಲ್ಬನ್ನವಡೆದೀಬಾಲೆ ।
ಬಾಡಿ ಬಂದಿಹಳಿವಳ ಸಂತೈಸಬಾರದೇ ।
ಬೇಡುವೆಂ ರಾಮನಾನಾಣತಿಯನೆನೆ ಕೈಕೆ ಮೆಲ್ವಾತಿನಿಂದೊರೆದಳು ॥೯॥

ವನಕೆ ಪೋಗೆಂದ ಪಾಪಿಷ್ಠೆಯ್ ಮಗುಱೆ ಬಂದೊಡೆಂ ।
ತೆನಿತುಪಚರಿಪುದೆಂದು ಪೋಪ ಸೊಬಗಂ ಕಂಡು ।
ತನಿವೆರ್ಚಿದಟಿಗಣ್ಗಳ್ಕೈತರಲ್ಕೆತ್ತಿ ಕಂಡೂಪುವೆ ಮತ್ತೆಂತು ನಿಮ್ಮ ॥
ಮನದೞಲನುೞುೞೆ ನೋಡಿ ಬೀಗಿದೀಸುಡುವೋಱೆ ।
ಮನೆಗೆ ಸಂತಸದಿ ಬರ್ಪಂದು ಕಾಣಿಪುದೆ ಮಾ ।
ತಿನ ಜಂಬಮೇಕೆ ಕೇಡೆಣಿಸಿರ್ದ ಮೂಱಿ ನಿಮ್ಮಭ್ಯುದಯಮಂ ನೋೞ್ಪಳೇ ॥೧೦॥

ಕೀೞುವೋಲೞಿಯದೆ ಮರುಳ್ತನದೊಳೊರ್ವ ಕೇ ।
ಡಾಳಿ ತಾನೊರೆದ ಬಿಱುನುಡಿಗೆ ಪೋಪುದೆ ಮಹಾ !
ಭೀಳಕಾನನಕಂತು ಪೋದೊಡಂ ಮರಳಿ ಬರೆ ಪೇೞ್ದುಟ್ಟಲಾಮಾತನು ॥
ಕೇಳದಿರ್ಪುದೆ ಪುರಾಕೃತದೋಷಮಿಂತೆನ್ನ ।
ನೇೞಿಸಿತು ಬೞಿದಾಡಿ ಪುರುಳದೇಂ ಕಂದ ಪಿಂ ।
ಬಾೞುವೆಯು ಮಱುವುದೆಂದಪ್ಪಿ ಕುಳ್ಳಿರಿಸಿದಳ್ ಕೈಕೆ ದುಮ್ಮಾನದಿಂದ ॥೧೧॥

ತಾಟಕಾಂತಕನಾಗಳಿಂತೆಂದನೆಮಗೆ ಪೂ ।
ದೋಟದಂತಾಯ್ತುಡವಿ ರಕ್ಕಸರೊಳನುವರಂ ॥
ಬೇಟೆಯಂತಾದುದೀರೇೞ್ಗಲಮೋಱೆರಟ್ಟಿಗೆಯೆನೆ ಖಳರುಪಟಳಂ ॥
ಆಟಕಿಮ್ಮಡಿಯೆನಿಸಿ ತೋರ್ದುದಾಪೊೞಲೊಳೀ ।
ಪಾಟಲಾನನೆಗೆ ನಿನ್ನೊಲ್ಮೆಯಿಂ ವೇಣ್ ಜಟಾ ।
ಜೂಟನಾರ್ಕೈಕೆಯಿಂದೆಂದು ಸಂತೈಸಿ ಪೊೞಟರ್ ಸುಮಿತ್ರೆಯನಱಿಯಲು ॥೧೨॥

ಚಿತ್ರವಸ್ತುಪ್ರಕರದಿಂ ಕಣ್ಗೆ ಶೋಭಿಪ ಸು ।
ಮಿತ್ರೆಯರಮನೆಗ್ಮೆದಿ ಕಂಡವಳ್ಗೆಱಗೆ ಶತ ।
ಪತ್ರಲೋಚನೆ ಕಿಚ್ಚಿಗಿಟ್ಟ ಬೆಳ್ಣೆಯ್ಯಂತೆ ಮನಗರಗಿ ಪಿಡಿದೆತ್ತುತುಂ ॥
ಕ್ಷತ್ರಧರ್ಮಂಬಿಡದೆ ಚಿರಕಾಲಮವನಿಯನ ।
ಮಿತ್ರರಿಲ್ಲೆನೆ ಪೊರೆವುದೆಂದು ರಾಘವನಂ ಸು ।
ಪುತ್ರವತಿಯೆನಿಸಿ ಬಾೞೆಂದವನಿಜಾತೆಯಂ ಪರಸಿ ಲಕ್ಷ್ಮಣಗೊರೆದಳು ॥೧೩॥

ಮುನ್ನಮೇ ರಾಘವನ ಸೆಱಗಿಗಿತ್ತೆಂ ಕಾವ ।
ವನ್ನೋಪ್ರುಬಾವಿನೊಳ್ ನಿನಗೆಂದು ತಾನದಱಿ ।
ನಿನ್ನೆನ್ನ ಪರಕೆ ಪೆಱತಿರದಣ್ಣನೇ ದೈವವೆಂದು ಗುರುವೆಂದು ಬಗೆದು ॥
ಎನ್ನೆಗಂ ಬಿಡದೆ ಪದಸೇವೆಯಂ ಚಿರಕಾಲ ।
ಬನ್ನಮಿಲ್ಲದೆ ಮಾಳ್ಪುದೆಂಬುದಿಂತಲ್ಲದೆಂ ।
ದುನ್ನತಾಸನಕೆ ಕರೆದುಯ್ದಪ್ಪಿ ಮೂವರಂ ಕುಳ್ಳಿರಿಸಿ ಮಗುೞೆಂದಳು ॥೧೪॥

ಕಾಡಿಗಗ್ರಜನೊಡನೆ ಪೋಪೆನೆಂದೆನ್ನನುಱೆ ।
ಕಾಡಿ ವ್ಯೈಮೆಯನೊಡಂಬಡುವಂತೆ ತನಗೆ ಬೞಿ ।
ಕಾಡಿ ಬೆಂಬತ್ತಿ ನಿನ್ನಂ ಸೇರ್ದ ಲಕ್ಷ್ಮಣನನಂತಲ್ಲದಡವಿಯೊಳಗೆ ॥
ಬೇಡರಂ ಕಂಡು ಬೆರ್ಚುವೆ ಬಾಲೆ ತನ್ನೊಡನೆ ।
ಬೇಡ ಬರ್ಪುದು ಕೂಟ್ಮೃಗಂಗಳಿರ್ದಪುವೆಂದು ।
ಬೇಡಲವನಿಜೆಯನೊಲ್ಲದೆ ನಂಬಿ ಬಂದವಳನೆಂತೋವಿದ್ಪೈ ರಾಘವ ॥೧೫॥

ವನವಾಸವೊಣಿಸೆ ಬಲ್ಬನ್ನಮಂತದಱೊಳ್ ಭು ।
ವನಮಱಿಯೆ ಸತಿಯಗಲ್ಕೆಯೆ ಪಿರಿದು ಬನ್ನಮಾ ।
ವನಧಿಯಂ ಕಟ್ಟಿ ಲಂಕೆಗೆ ಪೋಪುದತಿಬನ್ನಮಂತಸುರರೊಳ್ ಪೋಣರ್ದು ॥
ವನಿತೆಯಂ ಪಿಂತರ್ಪುದೀಡಿಱಿದ ಬನ್ನನೋ ।
ವನಿತನೊಳಕೊಂಡೆನ್ನ ಕಂದನಂ ಪೊರೆದು ಪಾ ।
ವನಿಸಿ ಕರತರ್ಪುದೇ ಬನ್ನ ಬನ್ನದೊಳೆಂದು ನುಡಿಯೆ ರಾಘವನೆಂದನು ॥೧೬॥

ಆವನೆಮ್ಮಂ ಕಾದನಂತು ಪಗಲಿರುಳೊಳಿ ।
ನ್ನಾವನಂ ಮಱೆದೆವೊಡನುಣಿಸಿಗೆಂದುಂ ತಿಳಿಯ ।
ದಾವಸಿಂ ತ್ರಿದಶರ್ಗೆ ಬಾಗದಸುರರ್ಮಡಿದರಾವಂಗೆ ಗೆಲವಾದುದು ॥
ಆವನ ಪರಾಕ್ರಮದೊಳಬಲೆ ಮೇಣ್ ಕೈಸೇರ್ದ ।
ಳಾವನೊಳ್ ಭ್ರಾತೃವಾತ್ಸಲ್ಯಮಿರ್ದಪುದು ನಿ ।
ನ್ನಾವತ್ಸ ಲಕ್ಷ್ಮಣನೆ ಪೇೞಬಲ್ಲಂ ತಾಯೆ ವಿಭವಮಂ ವನವಾಸದ ॥೧೭॥

ಸವಿನುಡಿಯ ಸೊಗಸು ನಿರಹಂಕಾರಭಾವವೊ ।
ಪ್ಪುವ ಮಾತೃಭಕ್ತಿ ಮುಪ್ಪುರಿಗೊಳಲ್ ಪಲ್ವೆಳಗು ।
ಕವಲೊಡೆಯೆ ದೆಸೆದೆಸೆಗೆ ಮನ್ನಿಸಿ ಸುಮಿತ್ರೆಯಂ ಪರೆಕೆಗೊಂಡೊಡನೆ ಪೊಱಟು॥

ಕವಿದು ರಿಂಗಣಗುಣಿದು ಸುೞಿದಾಡಿ ತಾಯೆಡೆಗೆ |
ಜವದಿಂ ಮರಳ್ವ ಕಱುವಂತೆ ಸಂತಸದೆ ರಾ |
ಘವನಾಗಳ್ಕೈತಂದನಬ್ಬೆಯರಮನೆಗೆ ಮನ್ನಿಸಿ ನುಡಿಸಲೆಂದು ಭರದಿ ||೧೮||

ಮುಗಿದರಳಿ ನೋೞ್ಪ ಕಣ್ಗಳ, ಬಿಗಿಸಡಿಲ್ವ ಪು |
ರ್ವುಗಳ, ಬೆಮರೊಡೆದು ನೆಱೆದುಬ್ಬುವಾನನದ, ಘೊ |
ರ್ದುಗೆಗೊಂಡ ಜೆಡೆಯ, ತೊಡವಿಲಿಕೊಡಂಕೆಯ ಕುಗ್ಗಿ ನೇರವೊಟ್ದುಪ್ಪ ಗಳದ ||
ಸುಗಿದೊಗೆದ ಮೆಯ್ಯ ನೀರ್ತರಗೊಂಡು ಭಾವಿಸುವ |
ಬಗೆಯ ನಿಜಮಾತೆಯಂ ರಾಘವಂ, ರಾಹು ಕೈ |
ದೆಗೆದ ಶಶಿಯಂತೆಸೆವ ರಾಮನಂ ಕುಶಲೆಯುಂ ಕಂಡರೋರೊರ್ವರಾಗ ||೧೯||

ಸೆಱೆಗೊರಲ್ ನಡುಕಂ ನಿವಿರ್ಗೂರ್ದಲೆಱೆಮನಂ |
ಕಿಱುಬೆಮರ್ ಸೊಗದ ಕಂಬನಿ ಬನ್ನದೞಿವು ಬೇ |
ಸಱದೞಿವುವೋಹವೊಗದೊಳ್ಪುವೈವಳ್ಪುತಲೆದೋರ್ದುದಿರ್ವರೊಳೊರ್ಮೆಯೆ ||
ಪಿರಿದೆನೆ ಪರಸ್ಪರಮುಖಾವಲೋಕನದಿನೀ |
ತೆಱದೊಳನ್ಯೋನ್ಯದರ್ಶನಸುಖಂ ನಾಡೆ ದಾ |
ಶರಥಿಕೌಸಲ್ಯೆಯರ ದರ್ಶನದ ಸುಖದಂತೆವೋಲಾದುದೆಣೆಗಾಣದೆ ||೨೦||

ಕಿತ್ತಡಿಯ ಜನ್ನಮಂ ಕಾದು, ಪೆಣ್ಗೈದಡಿಯ |
ನೊತ್ತಿ ಕಲ್ಲಂ, ಹರನ ಬಿಲ್ಮುಱಿದು, ಭಾರ್ಗವನ |
ನೊತ್ತಟ್ಟಿಗುೞಿದಯ್ಯನಾಣೆಯಂ ಬಿಡದಡವಿಯಂ ಸಾರ್ದು, ತೀಶರ್ಕಳ ||
ವೊತ್ತಮಂ ಪೊರೆದು, ಕಡಲಂ ಕಟ್ಟಿ ದಾನವರ |
ನೆತ್ತರಂ ಚೆಲ್ಲಿ, ತಿರೆವೊಱೆಯಿೞಿಸಿದ ಜಸವಂ |
ಪೊತ್ತ ಭಾರಕೆ ಸಿರಂ ಬಾಗಿತೆನೆ ಮಾತೆಯಡಿಗೆಱಗಿದಂ ಶ್ರೀರಾಮನು ||೨೧||

ಅಡಿಗೆಱಗಲೆತ್ತಿ ಕಂದನನಪ್ಪಿ ಪಿರಿದು ವ್ಮೈ |
ದಡವಿ ಕೈಯಿತ್ತು ಕುಳ್ಳಿರಿಸಿ ಪಲವುಂ ಪಗಲ್ |
ಪೊಡವಿಯಂ ಪೊರೆದು ಬೞಿಯಂ ಬೆಳಗಿ ಬಾಳ್ವಿರೆಂದಬ್ಬೆ ಬಾಯ್ದಣಿಯೆ ಪರಸಿ ||
ಕಡುಪಾಪಿಗೆನಗೇಕೆ ಪುಟ್ಟಿದೈ ನೀಂ ಕೈಕೆ |
ಯೊಡಲೊಳಾಗದೆ ಪಾತಕಿಯನಟ್ಟುವಂತೆ ಪೇ |
ರಡವಿಗಟ್ಟುವೊಡೆ ನಿನಗಂದು ಕಂಬನಿವಣಿಸರಂ ಪೇೞೆ ವೊಲೆಗೆಂದಳು ||೨೨||

ಮಕ್ಕಳಂ ಪಡೆದೋವಿ ಬಾಲಲೀಲೆಯನಂತು ।
ಪೆಕ್ಕಳಂ ಕಂಡು ಮುದ್ದಾಡಿ ನಲ್ನುಡಿಗೆ ನೆವ ।
ದಕ್ಕಜಂಗೊಂಡಾವಗಂ ಫಲದಿನೊಪ್ಪುವೆಳೆದೆಂಗಿನಂತಣುಗರೊಡನೆ ॥
ಚಿಕ್ಕಜೌವನೆಯೆಸೆಯಲವಳ ಸ್ಮೈಪುಂ ನಗೆಗೆ ।
ಪಕ್ಕಾಗೆ ತನೆಯುರಂ ಪಗೆದಟ್ಟಿ ತಾನೊರ್ವೆ ।
ಸೊಕ್ಕಿ ಮಿಡಿಯುಡಿದ ಮರನಂತಿರ್ಪ ಕಕ್ಕಸಿಯು ಸ್ಮೈಪುವೆಣೆಯಲ್ತೆಮಗನೆ ॥

ಮಿಟ್ಟುವಾದೊಡಮುಂಟು ಕಾಣ್ಬುದಣುಗನನೆನ್ನ ।
ಬಾಟ್ತನೆಯ ಕಿಱುಮಱಿಯನೊದೆದಟ್ಟಿ ಮೇವ ಪೆ ।
ಣ್ಗಿತ್ತಿಯಂ ಗೆಲೆವಂದುದೆಂದು ಕಂಬನಿ ಮಗುಳ್ದುಂಬೆ ರಾಘವನೆಂದನು ॥
ಪೊಟ್ಟಲ್ಲಮಿದು ತಾಯೆ ದುಃಖಿಸಲ್ ನಿನಗೆ ನೀ ।
ನಿಟ್ಟಿಯಿಂ ನಡೆವೇಳ್ದು ಪೊರೆವುದಂತಲ್ಲದೆ ನೆ ।
ಗಪ್ತವಡೆದೆಮ್ಮ ಜನಕನ ನುಡಿಗೆ ಪಾವನಂ ತಾನಾದೆನವನಿಯಱಿಯೆ ॥೨೪॥

ಒಯ್ಯರದ ಮಾತಲ್ಲ ಮಾತೆ ನೀ ಪರಸಲೆ ।
ಣ್ಮಯ್ಯವಂ ಕರುಣಿಸಲ್ ಕೈಕೆಯಟ್ಟಿದೊಡವೆ ।
ಮ್ಮಯ್ಯನುಟಿದೊಡಮಡವಿಯೊಳ್ಬವಣಿಗೊಂಡೊಡಂರಕ್ಕಸರ್ ಬಟಲಿಸಿದೊಡಂ ॥
ಕಯ್ಯೆಡ್ಡಗಟ್ಟಿ ಮೇಲ್ವಾಯ್ವ ದುಃಖಾಂಬುಧಿಯ ।
ನೊಯ್ಯನೆ ಸಡಿಲ್ದು ದಾಂಟಿದೆವು ಮೇಣ್ ಬಿನ್ನಪಂ ।
ಸಯ್ಯಡಿಯೊಳೆಱಗಿ ಪೇಳ್ದಪೆನೆನುತ್ತೆ ರಾಘವಂ ಮತ್ತೆ ಜನನಿಯೊಳೆಂದನು ॥೨೫॥

ಎನ್ನತೆನಗಕ್ಕುಮೆಂದಾವಗಂ ಕಂದನಂ ।
ನನ್ನಿ ಮಿಗೆ ಪೊರೆದಬ್ಬೆಯಂ ಸೇವಿಸದ ತನುಜ ।
ನಿನ್ನವಂ ಸುತನಲ್ಲಮಂತು ರೇತೋಜಾತಕೀಟಂ ವಲಂ ನೋಪ್ಪೊಡೆ ॥
ಮನ್ನಿಪುದು ತಾಯೆ ಬಹುಕಾಲ ಸೇವಿಸದಿರ್ದ ।
ದನ್ನೆಯಮಿದಂ ಕೊರ್ಮೆಯಿಂ ಜಸಂ ಸ್ನೆಪುವೆ ।
ನೆನ್ನೆಗಂ ಬಿಡದೆ ತನಗಪ್ಪಂತೆ ಬುದ್ಧಿಯಂ ನೆಱೆ ತಿಳಿಪಿ ನೀಂ ಕಾವುದು ॥೨೬॥

ಮಗನ ನುಡಿಬಿನ್ನಣಕೆ ಸಂತಸಂದಾಳ್ದು ಕ ।
ಣ್ಮಗಿಯದಿನಿಸುಂ ಕಂಡು ಮತ್ತೆ ಭೂಜಾತೆ ಪದ ।
ಯುಗಕೆ ಶಿರಮಂ ಬಾಗಿರಲ್ ಸೋಸೆಯನಂತು ದಿಟ್ಟಿಸಿ ಮುಟ್ಟಿ ಭುಜಲತೆಯನು ॥

ನೆಗಪಿ ಶಿರಮಂ ಮೂಸಿ ಕೊರಲನಿರ್ತೋಳ್ಗಳಿಂ ।
ಬಿಗಿದಪ್ಪಿ ಮೋಹಮೊತ್ತರಿಸೆ ಕುಳ್ಳಿರಿಸಿ ಬ ।
ಲ್ಬಗೆಯೊಳುಪಚರಿಸಿ ಮೇಣ್ಬರಸಿ ಮೆಲ್ನುಡಿದೋಱೆ ಸೀತೆಯೊಳೆಂದಳು ॥೨೭॥

ಎಱೆಯನೆಡರೊಡರೊಳುಱೆ ಪಾಲ್ಗೊಂಡು, ಮೇಲ್ಗೈದು ।
ಪಱೆನೇಸಱುರ್ಬೞಿಗಳಂ, ರಕ್ಕಸರ ಕುಲವ ।
ಮುಱಿವ ಸನ್ನಹಕೆ ಮೊದಲಾಗಿ ಪಾವನಮೆನಿಸಿ ಪೋದೆಡೆಯನೀರೆಳೆಯೊಳು ॥
ಬೆರೆದ ಪಡಿಯಿಲ್ಲದಂತಾದೊಡಂ ಕೇಳ್ವ ನೀ ।
ತಿರಿದ ವನದಿರವೆಂತು ಪುರದ ಸೊಬಗೆಂತು ರಘು ।
ವರನೆಲ್ಲ ಬಣ್ಣಿಸಿದ ಮಿಗದಿಕ್ಕೆಯೆಂತು ರಕ್ಕಸರೆಂತು ಪೇೞ ಸೀತೆ ॥೨೮॥

ಶಾಂತಿಧನ ಕೇಳ್ ಜನಕಜಾರಾಮರೆಸೆದರಾ ।
ಬಂತಿದೇರನ ಪಟ್ಟದರಸಿಯೆಡಬಲದೊಳ್ ಸ ।
ಮಂತದಿತಿದೇವಿಯಿರ್ಕೆಲದೊಳಂದೊರ್ಮೆ ಮೆಱೆದೊಪ್ಪಿದ ಶಚೀಂದ್ರರಂತೆ ॥
ಸಂತವಿಟ್ಟಾಗಳಾಣೆಗೆಗೊಂಡು ಮಾತೆಯಿಂ ।
ಕಾಂತೆಯೊಡನರಮನೆಗೆ ಪುಳಿನದೊಳ್ ನಲಿದಾಡಿ ।
ಸಂತಸದೊಳೆಣೆವೆರಸು ಸರಸಿಗೈತರ್ಪಂಚೆಯಂತೆ ರಾಮಂ ಬಂದನು ॥

ಮುನಿನಾಥ ಕೇಳ್ ಭರತಮುಖ್ಯರೊಡನಾಗಳರ ।
ಮನೆಗೆ ತೆರಳಲ್ ಮರ್ಕಟಪ್ರಮುಖರಂತು ರಾ ।
ಮನ ನೇಮದಿಂ ನವ್ಯಭವನಮಂ ಸೇರ್ದರೊಡನುಬ್ಬರದ ಸಂತಸದೊಳು ॥
ಅನಿತಱಿಂ ಮೇಲೆ ರಾಘವನ ಪಟ್ಟಾಭಿಷೇ ।
ಚನಕೆ ಸನ್ನಹಮಂ ಸುಮಂತ್ರ ಗುರು ಭರತರಂ ।
ದಿನ ದಿನದೊಳುೞಿದ ಕಡೆವಗಲೊಲಣಿಗೈಯುತಿರಲಿನನಬ್ಧಿಯಂ ಕಂಡನು ॥೩೦॥

ನಾಳೆಗೆನ್ನೀಬೞಿಯ ರಾಯಂಗೆ ಪಟ್ಟಮೆನು ।
ತಾಳೋಚಿಸಿರ್ಪರದಱಿಂ ಸಮಂ ರಥದೊಳಾ ।
ವೇಳೆಗೈತಂದು ಸೊಗಸಂ ಕಾಣಲಕ್ಕುಮೆಂದರಗೀಲ್ಕೞಲ್ಚಿ ಪಿಂದೆ ॥
ಬೀೞಲೋರ್ಗಾಲಿಯಬ್ಧಿಯೊಳದಂ ಪುಡುಕಿ ತರ ।
ಲಾೞಿದನೊ ಕಾಣೆನೆಂಬೋಲ್ ಭಾಸ್ಕರಂ ಬೞಿಕ ।
ಗಾಳಿವಟ್ಟೆಯಿನಿೞಿದು ಕಡಲ ನೀರ್ವುಗೆ ತಾರೆಗಳ್ ತೋರ್ದುವಂಬರದೊಳು ॥

ಭೃಂಗಾಳಿ ಕಮಲಸಂಕುಲಮನಾಕಾಶಮಂ ।
ತಂಗದಿರನವನೀರುಹಂಗಳಾಶ್ರಯಮಂ ವಿ ।
ಹಂಗಸಂದೋಹಮಬ್ಜಾಂಬಕೀಬೃಂದಮನನಂಗಂ ಪ್ರವೇಶಿಸಲ್ಕೆ ॥
ಪಿಂಗಿ ಪಡುಗಡಲೊಳದ್ದಂ ಪೋದನತ್ತಲ್ ಪ ।
ತಂಗನಾಗಳ್ ಸಂಜೆವೆಣ್ಣು ಮಿಂದುಟ್ಟ ಪೊಸ ।
ರಂಗುಸೀರೆಯ ಸೆಱಗಿನಂತೆ ಸಂಧ್ಯಾರಾಗಮೆಸೆದುದಂತಾದೆಸೆಯೊಳು ॥೩೨॥

ಮೇಲನಿತಱೊಳ್ ದೇಶದೇಶದರಸರ್ಗೆ ಕ ।
ಟ್ಟೋಲೆಯಂ ಬರೆವ ಮುನಿವರ್ಗಮಂ ಕರೆವ ದಿ ।
ಕ್ಪಾಲರ್ಗೆ ಪೇಳ್ದಟ್ಟುವಿನಿತು ಕಜ್ಜದಿ ಭರತಸಚಿವಗುರುಗಳ್ ಸೇರ್ದರು ॥
ಸಾಲನರಮನೆಗಳಂ ಸಿಂಗರಿಪ ಸುತ್ತಣ ವಿ ।
ಸಾಲಬೀದಿಗಳೊಳುಱೆ ತೋರಣಂಗಳ ರಚಿಸಿ ।
ಸಾಲದ ಸಮಸ್ತಸಂಭಾರಮಂ ಸವನಿಪುದಱೊಳ್ ಲಕ್ಷ್ಮಣಾದ್ಯರಿರಲು ॥೩೩॥

ಮೇಳವಿಸಿತುತ್ಸವಂ ರಾಜಮಂದಿರದೊಳಿ ।
ನ್ನೇಟಿರೇಟಿರಿ ತಾಮಸಂಬೇಡವೊಡನೆಮ್ಮ ।
ನಾಳುವನ ಪಟ್ಟಾಭಿಷೇಕಮಂ ಕಣ್ದಣಿಯೆ ಕಾಣಲಕ್ಕುಂ ಪೂರ್ವದಿ ॥
ಕೇಳಿಬಲ್ಲಿರೆ ಬಿಡೌಜನ ಪಟ್ಟಡಿರವನದ ।
ಕೇಟುಮಡಿ ಮಿಗಿಲಪ್ಪುದುಂಟೆಂದು ಬಿಡದೆ ಲೋ ।
ಕಾಳಿಯಂ ಕತ್ತೆತ್ತಿ ಪೇಟಿ ಕರೆದಪುದೆನಲ್ ಕೋಟಿ ಕುಕ್ಕೊ ಎಂದುದು ॥೩೪॥

ಜೋಡಿಸಿದ ಮಂಡಪಗಳೆಂತಿರ್ಪುವಲ್ಲಲ್ಲಿ ।
ಕೂಡಿಸಿದ ಸಂಭಾರಮೆನಿತುಂಟು ಸೇವೆಯೊಳ್ ।
ನಾಡ ಜನರಾರಿಲ್ಲ ಸಾಮಂತರೆಲ್ಲಿಹರ್ ದಿಗಧೀಶರೆಲ್ಲರೆಡೆಗೆ ॥
ಓಡಿಹರೆ ಚಾರರೀವಿವರಮಂ ಪೋಗಿ ನೀಂ ।
ನೋಡಿ ಬಾರೆಂದಿನಂ ಕಳುಹಲುದಯಾಚಲದ ।
ಕೋಡುಗಲ್ಲಂ ಸಾರ್ದನೂರ ನೋಡುವೆನೆನಲ್ ಮುಂಬೆಳಗು ಬೆಳಗಿತಾಗ ॥೩೫॥

ಪಗೆಯವಂ ದ್ರೋಹಚಿಂತಕನೆಂದೆಣಿಸದೆ ಮಱೆ ।
ವುಗಲೆನ್ನನಿರದೆ ಕಾದವನೆಂದು ರಾಮನಂ ।
ಪೊಗಟಿ ಕಾಕಾಯೆಂದು ಬೇಡಿಕೊಂಡಪುದೆನಲ್ ಕಾಗೆ ಕೂಗಿದುದಾಗಳೆ ॥

ಖಗಕುಲದ ರಾಯಂಗೆ ಪಟ್ಟಮದಱಿಂ ತಮ್ಮ |
ಬಗೆಯವರಿಗೊರೆದು ಕರೆಯಲ್ಕೆಂದು ಸಂತಸದಿ |
ನೆಗೆದಪುವೊ ನಭಕೆನಲ್ ಮಿಕ್ಕುಟಿದ ಪಕ್ಕಿಗಳ್ ಪಾಱಿದುವು ದಿಕ್ಕುದೆಸೆಗೆ ||೩೬||

ಇನ್ನು ಪೊಲಾತ್ತುದುದೆಂದೆಟ್ಟುಱಿಸಲಸವಸದಿ |
ಬಿನ್ನಣದ ರಥಕೊಂದೆ ಗಾಲಿಯುಂ ಪೂಡಿ ಬದಿ |
ದೆನ್ನಿಗೇಟ್ಟುದುರೆಯುಂ ಕಟ್ಟಿ ಕೆಲಬಲದಿ ಪಾವಿಂ ಬಿಗಿದು ಸಾರಥಿಯನು ||
ತನ್ನ ಮುಂದಿರಿಸಿ ತಾನಡರಿ ಪೊಡೆ ಪೊಡೆಯೆಂದು |
ಸನ್ನೆಗೈದರ್ಯಮಂ ಪೂರ್ವಾದ್ರಿಯಂ ಪತ್ತಿ |
ಸನ್ನುತಮಹಾಭಿಷೇಕವನೀಕ್ಷಿಸಲ್ಕೆಂದು ಬರುತಿರ್ದನಾತುರದೊಳು ||೩೭||

ಮುನಿಪ ಕೇಳ್ ಬಟಿಕ ವೈಶಾಖಸಿತಸಪ್ತಮಿಯು |
ದಿನದುದಯಕಾಪುರದೊಳೆತ್ತಲುಂ ಬದ್ದಣದ |
ದನಿ ತಡೆಯದ್ವೈತಪುದೆಂದು ದಿಕ್ಪಾಲರಂ ಕರೆವಂತೆ ಪುದಿದುದೊಡನೆ ||
ಅನಿತಱೊಳ್ ಬಟಿವಿಡಿದು ನಡೆತರ್ಪ ನಾಲ್ದೆಸೆಯು |
ಜನಪಾಲಕರ ವಿಭವಕೆಂಬುದೇನೆಣಿಕೆಗೊಳ |
ಗೆನಿಸದಂದಣತುರಗಕರಿರಥೋತ್ಕರಂಗಳ್ಗೆ ಬೀದಿಗಳ್ ಕಿಱಿದಾದುವು ||೩೮||

ಬಂದ ರಾಯರನುಚಿತವಚನದಿಂ ನುಡಿಸಿ ಕರ |
ತಂದು ಬೀಡಾರಮಂ ತೋರ್ದು ಪಡಿಯಿತ್ತು ನಲ |
ವಿಂದೆ ಮನ್ನಿಸುತಿರ್ದರಲ್ಲಲ್ಲಿ ಗುರುವಸಿಷ್ಠನ ನೇಮದಿಂ ಸಚಿವರು ||
ಮುಂದೆ ಸುಮುಹೂರ್ತಮಂ ಕಾಯುತಿರ್ದರ್ ಶುಕ್ರ |
ಮಂದಗುರುಗಳ್ ಕಮಲಜನ ನೇಮದಿಂ ಸಭಾ |
ಮಂದಿರವನಮರವರ್ಧಕಿಗಳಿಂದ್ರನ ನೇಮದಿಂದ ಪವಣಿಸುತಿರ್ದರು ||೩೯||

ಬಿದುಗಲ್ಲ ನೆಲದ ಕಡವರದ ಗೋಡೆಯ ಮೇಲೆ |
ಪುದಿದ ಪಚ್ಚೆಯ ತೊಲೆಯ ರನ್ನಬೋದಿಗೆಯ ನಾ |
ಲ್ಬದಿಯ ನೀಲದ ಕಂಬದೆಡೆಯ ಮುತ್ತಿನ ಸೂಸಕದ ಪವಳವೊಗವಾಡದ ||
ಇದಿರೊಳೊಪ್ಪುವ ಕೆತ್ತಿಗೆಯ ಪಡಿಯ ಬಜ್ಜರದ |
ತುದಿಯ ಕೆಲಸದ ಸೊಗಸಿನೋಲಗದ ಸಾಲೆ ಬಂ |
ದೊದಗಿದರಸರ ಧಾತುಗೊಳಿಪುದಚ್ಚರಿಯೆ ಧಾತೂತ್ಕರಂ ತಾನಾಗಿರೆ ||೪೦||

ಸುರಪಂ ಧನಂಜಯುಂ ಧರ್ಮರಾಜಂ ಸರಿ |
ದ್ವರನೀಶನಾಶುಗಂ ನರವಾಹನಂ ಧನೇ |
ಶ್ವರನಬ್ಜಸಂಭವಂ ಮುಂತಪ್ಪರಿರದೆ ನಿಜವಾಹನಂಗಳನಡರ್ದು ||
ಪರಿಚರರ್ಕೂಡೆ ಪೆಂಡಿರ್ವೆರಸು ನಡೆತಂದು |
ವರಸಭಾಭವನಮಂ ಸಿಂಗರಿಸಿದರ್ ತಮ್ಮ |
ಚಿರಪದವಿಗೆಡರಡರದಂತೆ ಕಾದವನ ಸಂತಸದ ಸುಗ್ಗಿಯ ಸಮಯಕೆ ||೪೧||

ನಾರದಂ ನಮುಚನರಿಮುಚನಗಸ್ತ್ಯಂ ಜರ |
ತ್ಕಾರು ಕಾತ್ಯಾಯನಂ ಕಾಶ್ಯಪಂ ಕಣ್ವನಹಿ |
ವೀರಂ ವಿಭಾಂಡಕಂ ವೀರ್ಯವಂತಂ ವಿಮುಖನತ್ರಿ ವಿಶ್ವಾಮಿತ್ರನು ||
ಭೂರಿಕೇಶಂ ಚ್ಯವನನಾತ್ರೇಯನುನ್ಮುಖಂ |
ಪಾರಿಭದ್ರಂ ಯವಕ್ರೀತನೇಕತನಿಂತು |
ಧಾರಿಣಿಯ ಸಕಲಮುನಿವರರಂದು ಬಂದು ಚಾವಡಿಯೊಳೊಪ್ಪಿರ್ದರಲ್ಲಿ ||೪೨||

ಅಂಗ ಬರ್ಬರ ಮಗಧ ಪಾಂಚಾಲ ಕೇರಳ ತೆ |
ಲುಂಗ ನೇಪಾಳ ಕರ್ಣಾಟ ಮಾಳವ ಕುಕುರ |
ವಂಗ ಘೂರ್ಜರ ಚೋಳ ಚೀನ ಕೊಲ್ಲಾಳ ಕೊಂಕಣ ಸಿಂಧು ಕೊರಹ ಭೇಟ ||
ಬಂಗಾಳ ಗೌಳ ಗಾಂಧಾರ ಕುಂತಳ ಹೈದ |
ಕೊಂಗ ಕಾಶ್ಮೀರ ಹಮ್ಮೀರಾರ್ಯಸಿಂಹಲ ಕ |
ಳಿಂಗ ಕಾಂಭೋಜ ಮುಂತಪ್ಪ ನಾಡೊಡೆಯರೋಲಗದ ಸಾಲೆಯೊಳೆಸೆದರು ||೪೩||

ಬಾಡುಬರ ಗಡಣಂ ಪ್ರವಾಸಿಕರ ಕೂಟಮಾ |
ನಾಡಿಗರ ಗೊಂದಣಂ ಜೋಸೆಯರ ನೆಱವಿ ಮೇಣ್ |
ಕೋಡಗರ ಬಳಗಮಲ್ಲಲ್ಲಿ ನೆಲೆಗೊಂಡಿರ್ದುವೀಮಹೋತ್ಸವವನಿರದೆ ||
ನೋಡಿ ಪಾವನರಪ್ಪೆವೆನುತೆ ಮೂಲೋಕದಿಂ |
ನಾಡೆ ಸುರನರನಾಗದನುಜಗಂಧರ್ವಾದ್ಯ |
ರಾಡಲೇಂ ಸಕಲರ್ಕೈತಂದು ನೆರೆದಿರೆ ಕಣ್ಗೆ ಸೊಗಸಾದುದಾಶಾಲೆಯು ||೪೪||

ತುಂಬಿಹುದು ಚಾವಡಿಯೊಳಖಿಳಜನಜಾಲಮಿ |
ನ್ನಿಂಬಿಲ್ಲ ಕೇಱಿಯೊಳ್ ನಡೆತರ್ಪ ಪಯಣಿಗ |
ರ್ಗೆಂಬ ಬಗೆಯಿಂ ಪೊಱಡಲನುಮಾನಮಾಗೆ ತಾಮೆಲ್ಲರೊಡಗೂಡಿ ಬಟಿಕ ||

ಅಂಬರದೊಳೊಂದೆಡೆಯೊಳೊಗ್ಗಿ ನೋಡುವರೆನ।
ಲ್ಕೊಂಭತ್ತುಱೆಣಿಕೆಯಿಂ ಗ್ರಹರೇಕರಾಶಿಯೊಳ।
ಗಂಬುಜಾಸನನ ಕಟ್ಟಳೆಯೊಳೆಸೆದರ್ ಶುಭೋದಯರಾಗಿ ಶುಭಕಾರ್ಯಕೆ ||೪೫||

ಆಸಮಯದೊಳ್ ಸಕಲಮುನಿಗಳಭಿಮತದಿಂದಿ।
ದೇ ಸುಲಗ್ನಂ ಪುರೋತ್ಸವಕೆಂದು ಪೇೞೆ ಕಮ।
ಲಾಸನಂ ವರಪುರೋಹಿತನಾಜ್ಞೆಯಿಂ ಪೊಱಟು ಸಾವಂತರಾಯರೆಲ್ಲ ||
ಸೌಸವದ ಪನಿನೀರ ಜಳಕಮಂ ಗೆಯ್ಸಿ ಪೊಸ।
ದೇಸೆಯಿಂ ಪಟ್ಟುಡೆಯನುಡಿಸಿ ಭಂಡಾರದಿಂ।
ಮಿಾಸಲೊಂದದ ರನ್ನದಾರಮಂ ತುಡಿಸಿ ರಘುರಾಮನಂ ಕರೆತಂದರು ||೪೬||

ವಸುಧೆಯಂ ಪೊರೆದು ದುಷ್ಟರನಿಕ್ಕಿ ಪೊತ್ತ ಬೆ।
ಳ್ಗಸದೆಸಕಮಲ್ಲದೆ ಕಿರೀಟದೀಧಿತಿಯಲ್ಲ।
ವೊಸೆದ ಜಯರಮೆಯ ಮೇಖಲೆಯ ಪೊಳೆಪಲ್ಲದಿದು ಕೇಯೂರಕಾಂತಿಯಲ್ಲ ||
ನಿಸದಂ ಪ್ರತಾಪದತಿಶಯಮಲ್ಲದಿದು ಮೇಲೆ।
ಮಿಸುಪ ಮಾಣಿಕದ ಪದಕದ ಶೋಭೆಯಲ್ಲವೆನೆ।
ಪಸದನಂ ಪೊಸತೊಂದು ಮಾಡ್ಕೆಯಿಂದೆಸೆಯೆ ಪಟ್ಟಾಭಿರಾಮಂ ಬಂದನು ||೪೭||

ಆಲಿಸೆಲೆ ಮುನಿಪ ಮನ್ನಣೆಯ ಸಾವಂತರೊಡ।
ನೋಲಗಕೆ ನಡೆತರ್ಪ ರಾಮನಂ ಕಂಡು ದಿ।
ಕ್ಪಾಲಕರ್ ಮಣಿಯೆ ಮುನಿಗಳ್ ಪರಸೆ ಕೈಗಟ್ಟಿ ನಿಲೆ ಮಿಕ್ಕ ಸರ್ವಜನರು ||
ಮೂಲದರಸುಗಳ ಪರಿವಿಡಿಯೊಳೊಪ್ಪಿದ ಕಿರಣ।
ಮಾಲಿಯನ್ವಯದ ಸಿಂಹಾಸನದಿ ಸಕಲಸುರ।
ಜಾಲದನುಮತಿಯಿಂದೆ ಕೈವಿಡಿದು ಕುಳ್ಳಿರಿಸಿದಂ ಸುಮಂತ್ರಂ ಸಭೆಯೊಳು ||೪೮||

ಮಣಿದು ಗುರುಪದಕೆ ಪಿರಿಯರ್ಗೆಱಗಿ ಮನದಿ ದಿನ।
ಮಣಿಗೆ ಕೈಮುಗಿದು ಸಭೆಗಿಂಬಾಗಿ ಬಾಗಿ ಬೆಲೆ।
ವಣಿಯ ಗದ್ದುಗೆಯನೆಲ್ಲರ್ ಪೊಗೞೆ ಗುರುವಾಜ್ಞೆಯಿಂದೇಱೆ ಕಾಕುತ್ಸ್ಥನು||
ರಣದ ವೈಸಿರಿಯೆನಿಪ ಕೈದುವಂ ಭಾಸ್ಕರಕಿ।
ರಣದ ಪಡಿಯೆನೆ ಪೊಳೆವ ಮಗುಟಮಂ ಕುಲದನುಸ।
ರಣದ ಪದ್ಧತಿಯಂತೆ ರಾಜಮುದ್ರೆಯನೊಪ್ಪಿಸಿದರಾಗ ಮಂತ್ರಿವರರು ||೪೯||

ಪೊಂಗಳಸದೊಳ್ ತುಂಬಿ ಬಟಿಕ ವೇದೋಕ್ತದಿಂ।
ಗಂಗೆಯುಂ ಗಂಧಕುಸುಮಾಕ್ಷತೆಗಳಿಂದೆ ಮುನಿ।
ಪುಂಗವ ವಸಿಷ್ಠನರ್ಚಿಸಿ ಸಕಲರಭಿಮತದೊಳಾಕ್ಷಣಂ ಶ್ರೀರಾಮಗೆ ॥
ಮಂಗಳಾನಕದ ರವದೊಡನೆ ಸುರಗಾಯಕರ।
ಸಂಗೀತಮಧುರಸ್ವರಂ ಬೆರೆಯೆ ಸಾಮಗಾ।
ನಂಗಳೊಡನಾಶಿಷದ ನಿರ್ಘೋಷಮೆಸೆಯೆ ತಾನಭಿಷೇಕಮಂ ಗೆಯ್ದನು ॥೩೦॥

ನೂತನಾಲಂಕಾರದಿಂದೆಸೆಯೆ ಮತ್ತೆ ರಘು।
ಜಾತನಾಗದ್ದುಗೆಯೊಳಿತ್ತಲಬ್ಜಾಕ್ಷಿಯರ್।
ಸೀತೆಯಂ ಕಮ್ಮೆಣ್ಣೆಯಂ ಪೂಸಿ ಮಿಸಿಸಿ ತುರುಬಿಕ್ಕಿ ಕುಸುಮಗಳ ಮುಡಿಸಿ ॥
ಪೀತಾಂಬರವನುಡಿಸಿ ಮಣಿವಚ್ಚಮಂ ತುಡಿಸಿ।
ಶೀತಾಂಶುಮಂಡಲಕೆ ಕಱೆಯೆನಲ್ ಕತ್ತುರಿಯ।
ನೋತು ಫಣೆಯೊಳ್ ತಿಲಕವಿಟ್ಟು ಕೈಗೊಟ್ಟು ಕರೆತಂದರೋಲಗದ ಸಭೆಗೆ ॥

ಪತಿಯ ವೈಭವಮೆಂದು ನಗೆದೋಱಿ ನೆರೆದ ಭೂ।
ಪತಿಗಳೆಮ್ಮವರೆಂದು ಕಣ್ಗೊಟ್ಟು ಪೂಜ್ಯರ್ಜ।
ಗತಿಗೆ ನಿರ್ಜರರೆಂದು ಬಗಗೊಂಡು ನಿಗ್ರಹಾನುಗ್ರಹಸಮರ್ಥರೆಂದು ॥
ಯತಿಗಳಂ ಮೆಚ್ಚಿ ಘನಜಘನಭಾರಕೆ ಮಂದ।
ಗತಿದೋಱೆ ಕಲಶಕುಚಭರಕೆ ನಡು ಬಳ್ಕೆ ರೇ।
ವತಿಯರೊಡವರ್ಪ ರೋಹಿಣಿಯಂತೆ ಬಂದಳಾಳಿಯರೊಡನೆ ರಾಜಸಭೆಗೆ ॥೩೨॥

ಕುಂತಲಭ್ರಮರಮಡಿದಾವರೆಯ ಮಧುವಂ ನಿ।
ತಾಂತಮಸಿದುಣ್ಬುದೆನೆ ಭೂಜಾತೆ ಬಂದು ನಿಜ।
ಕಾಂತನಡಿಗೆಱಗೆ ಪಿಡಿದೆತ್ತಿ ವಾಮಾಂಕದೊಳ್ ಕುಳ್ಳಿರಿಸಿದಂ ರಾಮನು ॥
ಸಂತಸದ ಸುಗ್ಗಿಗೆ ಕುಕಿಲ್ವ ಕೋಗಿಲೆಯಂತೆ।
ದಂತಿಗಮನೆಯರೊಲ್ದು ಪಾಡಿ ಪೊಂದಟ್ಟೆಯೊಳ್।
ಕಾಂತರತ್ನಪ್ರದೀಪಂ ಬೆಳಗೆ ಬೆಳಗಿದರ್ ಮಂಗಳಾರತಿಯನಾಗ ॥೩೩॥

ನಾರದಂ ಪಾಡುತಿರೆ ತುಂಬುರಂ ಕಲಮಂದ್ರ।
ತಾರವ್ಯವಸ್ಥೆಯಿಂ ವೀಣೆಯಂ ನುಡಿಸುತಿರೆ।
ವಾರಿಜೋದ್ಭವನಲ್ಲಿ ಸೂಱೆಱಿತು ಪೊಗೞುತಿರೆ ವೇದಸೂಕ್ತಂಗಳಿಂದ ॥

ವಾರನಾರಿಯರೆಲ್ಲ ನೃತ್ಯವಾಡುತಿರೆ ಗಂ ।
ಭೀರಭೇರೀರವಂ ಪೊಣ್ಮುತಿರೆ ದೇವಮಂ ।
ದಾರಪುಷ್ಪಸ್ರುಜದ ತೋರಮಪೆಗಱೆದುದೋಲಗದಿ ರಾಮನ ಶಿರದೊಳು ॥೫೪॥

ದಿಗ್ಗಜಂಗಳ್ ಮುಕ್ಕುೞಿಕ್ಕಿದುವು ಪೊಱೆಯ ಬ ।
ಲ್ಪುಗ್ಗಿನಿಂ ಕುಸಿದ ತಲೆಗಳನೆತ್ತಿ ಕಚ್ಛಪಂ ।
ಹಿಗ್ಗಿ ಕಾಲಾಡಿದಂ ಮೆಯ್ಮುರಿದು ಸರಿದು ಪೆಡೆಯೆತ್ತಿದಂ ನಾಗೇಂದ್ರನು ॥
ಅಗ್ಗಿ ಮೊಗರೊಡಲ ಪಸಿವಡಗಿದುದು ಮೆಯ್ಮವಣ್ಣ ।
ತಗ್ಗಿದೆಳೆವೆಣ್ಣ ಬಿಂಕಂ ಬಿಗುಪಾರ್ದುದೀ ।
ಸುಗ್ಗಿಯೊಳ್ ದಾನವಾಂತಕನ ಮೂರ್ಧಾಭಿಷೇಚನದೊಳಿಂದೀದಿವದೊಳು ॥೫೫॥

ಆದವೆಡಬಲಮಿರ್ದು ಚಮರೀರುಹಂಗಳಂ ।
ಸೋದರರ್ ಬೀಸೆ ಸರಿಲೆಕ್ಕಮಂ ಕರಣೀಕ ।
ರೋದೆ ಜಸದೊಸಗೆಯುಂ ವಂದಿಗಳ್ ಕೊಂಡಾಡೆ ಕುಲದೇವ್ಗೆಯಂ ಮಗಧರು ॥
ಸಾದರಮಮಾತ್ಯರ್ ನಿಯುಕ್ತವಾರ್ತೆಗಳಂ ನಿ ।
ವೇದಿಸೆ ಸಮಸ್ತಸಾಮಂತರೋಲೈಸೆ ಸಂ ।
ಮೋದದಿಂ ಪಟ್ಟಾಭಿರಾಮನೊಡ್ಡೋಲಗಂಗೊಟ್ಟಿರ್ದನಾಸಭೆಯೊಳು ॥೫೬॥

ಭೂರಿದಕ್ಷಿಣೆಯನವನೀಸುರರ್ಗೀವಂ ಕು ।
ಬೇರನಬ್ಜೋದ್ಭವಂ ಮುನಿಗಳ್ಗೆ ತಾನೆ ಸ ।
ತ್ಕಾರಮಂ ಮಾಳ್ಪನಮರೇಂದ್ರನಭ್ಯಾಗತರ್ಗೆಡೆಗೆಯ್ವನೋಲಗದೊಳು ॥
ಮಾರುತಂ ಬೀಸುವಂ ಧರ್ಮರಾಜಂ ಕುಸುಮ ।
ಹಾರಾನುಲೇಪನಂಗಳಿನರ್ಚಿಸುವನೀಶ ।
ನಾರ್ಕೈವನಗ್ನಿ ವೀಳೆಯವಿಡುವನರ್ಘ್ಯಪಾದ್ಯವನೀವನಾವರುಣನು ॥೫೭॥

ಯವನ ಕುಳ್ಳಿರ್ ಚೈದ್ಯ ಬಂದೆಱಗು ಮುಂತೆ ಸ್ಮೆಂ ।
ಧವ ನುರ್ಗದಿರ್ ಪೊಱಡು ಸೌರಾಷ್ಟ್ರ ಕಾಣಿಕೆಯ ।
ನವನೀಶಗಿಡು ನಿಷಧ ಹೂಣನಾರ್ ಸೌವೀರನೆಲ್ಲಿ ಕರೆ ಹೈಹಯನನು ॥
ಪವಣಱಿತು ನಡೆ ಲಾಳ ಕೈಗಟ್ಟು ಚೋಳ ಪಿಂ ।
ತನವನೊಡನೆ ಪೋಗು ಕರ್ಣಾಟ ನೀನೆಂದಲ್ಲಿ ।
ಪವನಜಂ ಮುಂತಪ್ಪ ಮರ್ಕಟಪ್ರವರರೋಲೈಸುತಿರ್ದರ್ಸಭೆಯೊಳು ॥೫೮॥

ಇದು ಸುರಪನಿತ್ತ ಪೊಸಬಾಸಿಗಂ ಕೈಕೊಳ್ವು ।
ದಿದು ಶೇಷನಿತ್ತ ಮಾಣಿಕದ ಕುಂಡಲಮಿತ್ತ ।
ಲಿದು ವರುಣನಿತ್ತ ಮುತ್ತಿನ ಹಾರಮಿದು ಹುತಾಶನನಿತ್ತ ರತ್ನಂಗಳು ॥
ಇದು ಕುಬೇರಂ ತಂದ ಪೊನ್ನ ಭಂಡಾರಮಿಂ ।
ತಿದು ಸಮೀರಂ ತಂದ ಕತ್ತುರಿಯ ಭಾರಮಿ ।
ನ್ನಿದು ಗಿರೀಶಂ ತಂದ ದಿವ್ಯಗೈರಿಕಮೆಂದು ಕಾಣಿಕೆಯನೊಪ್ಪಿಸಿದರು ॥೪೯॥

ಭೂರಮೆ ಭುಜಾಗ್ರದೊಳ್ ಭುಜಮಧ್ಯದೊಳ್ ಜಯ ।
ಶ್ರೀರಮೆ ನಿಜಾಂಕಬಂಧುರಪೀಠತಟದೊಳ್ ಮ ।
ನೋರಮೆ ವಿಲಾಸದಿಂ ಮೆಱೆದಿರಲ್ ದಿಕ್ಕಾಂತೆಯರ್ಗೆ ದಿಗ್ಗಜನಿಕರಕೆ ॥
ಸಾರಘನಸಾರದಣ್ಪಂ ಕೀರ್ತಿಮುಖಮಂ ಯ ।
ಶೋರಶ್ಮಿಯಿಂ ಪುದುಂಗೊಳಿಸಿ ಮಱೆವೊಕ್ಕ ಸುರ ।
ವಾರಮಂ ಕಾದೊಂದು ತೇಜದಿಂ ರಾಘವಂ ಸಿಂಹಾಸನದೊಳೆಸೆದನು ॥೬೦॥

ಪರಮರಣಕಾಂಕ್ಷಿಯಾಗಿರ್ದುಂ ಬೃಹತ್ಕೃಪಾ ।
ಶರಧಿ ಭವದೂರನಾಗಿರ್ದುಂ ಭವಪ್ರಿಯಂ ।
ನೆಱೆ ನೃಶಂಸನಪಾತ್ರನಾಗಿಯುಂ ಸುಜನವತ್ಸಲನುಂ ಜಗತ್ಪೂಜ್ಯನು ॥
ಅರಸಂ ಸದಾವಿನುತನಾಕಲಂಕಾಪ್ರಥಿತ ।
ನಱಿಯಲ್ಕುರೂಪಾತ್ತವಿಗ್ರಹನುಮಾಗಿರ್ದು ।
ಸರಸೋದಯಂ ನಿಷ್ಕಲಂಕನಾಗೆಸೆದಂ ತ್ರಿಲೋಕಾಭಿರಾಮನೆನಿಸಿ ॥೬೧॥

ಸಲೆ ನೋಡಲ್ಕೆದೆ ತಲೆಯೊಳ್ ನವಿರ್ಗಳಾಗಸಂ ।
ಚಲಿತಮಧುಪದ್ಯುತಿಯನಾಳ್ದಮರೆ ಕಂಬುಗಳ ।
ಹೊಳರಮೆಯ್ಯಿಂಗಳನಯನಮೆಸೆವ ಫಾಲ ಧೃತಪುನ್ನಾಗಶೋಭೆ ನಿಮಿರೆ ॥
ಕೆಲದೊಳಚಲಾತ್ಮಭವೆಯಿರೆ ರಾಜಮೌಳಿಯೇಂ ।
ತೊಳಗಿದನೊ ಶಿವನೊಳಂ ತನ್ನೊಳಂ ಭೇದಮೇಂ ।
ತಿಲಮಾತ್ರಮಿಲ್ಲೆಂಬ ಬಿರುದನುಮೊಱಲ್ದು ಸಾರ್ಥಕಮಂ ನೆಗೞ್ವವಂತೆ ॥೬೨॥

ಪಾಡಿದರ್ ಕಿನ್ನರರ್ ನಲಿದರ್ ಭವಾದಿಗಳ್ ।
ನೋಡಿದರ್ ಕಣ್ಗಳ ಮಲಂ ಮಾಂಜಲೊಡನೆ ಕೊಂ ।
ಡಾಡಿದರ್ ದ್ವಿಜವರರ್ ದಿಗಧಿಪರ್ದನುಜರ್ನಿಜಾಂಗಮಂ ದಂಡದಂತೆ ॥

ನೀಡಿದರ್ ಕಾಣ್ಕೆಯಂ ನಮಿಸಿ ಸಂತಸದೊಳು |
ಕರ್ಗಡಿದರ್ ನೆರೆಪೊರೆಯ ಜನಪದದ ಮನ್ನೆಯರ್ |
ಕೂಡೆ ಕುಣಿಕುಣಿದು ದಣಿದಣಿದು ಮಣಿಮಣಿದು ತಣಿತಣಿದರ್ ಸಮಸ್ತ ಜನರು ||

ಒಂದನೆಡೆಗೆಯ್ದೆರಡು ಭಾವಮಂ ತೊಱೆದು ಮೂ |
ಱಂದದಿಂ ಪದೆದು ನಾಲ್ಕಱೊಳ್ಯೆದನಳವಡಿಸಿ |
ಸಂದಾಱನೊದೆದು ಸದೆದೇೞನೆಂಟುಮನಿಕ್ಕಿ ಹೃದಯಮಮರ್ಾಂಬರದೊಳು ||
ನಿಂದಿರಿಸಿ ಬಿಂದುರೂಪಮನೊಱಲ್ದೊಂಭತ್ತ |
ಱಿಂದೆಱಗಿ ನುತಿಸಿದರನಂತಚಿತ್ಪ್ರಭನನಿಂ |
ತೆಂದಮಂದಾನಂದದಿಂದೊಂದಿದಮಲಗುಣಸಾಂದ್ರರ್ ಮುನೀಂದ್ರರಂದು ||೬೪||

ಗುರು ನಿರಂಜನ ನಿತ್ಯ ಶುದ್ಧ ಪರಿಪೂರ್ಣ ಪರ |
ತರ ಪರಮಹಂಸ ದುರಿತಧ್ವಂಸ ವಿಶ್ವವಿ |
ಸ್ತರಣಾದಿಹೇತು ಕೈವಲ್ಯಲಕ್ಷ್ಮೀರಮಣ ವೈಕುಂಠ ನಾರಾಯಣ ||
ನಿರುಪಮ ಚಿದಾನಂದ ಗೋವಿಂದ ಸತ್ಯಮಂ |
ದಿರ ಸತ್ಸ್ವರೂಪ ತತ್ತ್ವಾತೀತ ಧಾತ ನಿ |
ರ್ಮರಣ ಶರಣಾಗತಜನೈಕಸುರಧೇನು ಶರಣಾಗ ತನುಭೂರಿಲೀಲ ||೬೫||

ಶರಣಾಗನಾದ್ಯನಿಶ್ಚಿಂತ್ಯ ಚಿದ್ಘನ ಚರಾ |
ಚರದ ಚೈತನ್ಯಾತ್ಮ ಪರಮಾತ್ಮವ್ಯೋಂ ಪರಾ |
ತ್ಪರ ಪರಂಬ್ರಹ್ಮ ನಿರ್ಗುಣ ನಿಸ್ತುಲಾಂಗ ಸತ್ತಾಮಾತ್ರ ಸಚ್ಚಿತ್ಪ್ರಭಾ ||
ಸ್ಥಿರತತ್ತ್ವ ವಿಚ್ಛಿದಂಬರರಂಗನಟ ಜಗ |
ದ್ಭರ ನಿಗಮಯೋನಿ ನಿರವದ್ಯ ನಾಸ್ತಿಕಭಯಂ |
ಕರ ಭೀಮ ಕಾಮದ ಮಹಾಮಹಿಮ ಮಾಯಾರಮಾರಾಮ ರಾಮನಾಮ ||೬೬||

ಜಲರುಹಭವಾಂಡಸರ್ವಸ್ವಮಂ ಪೇರೊಡಲೊ |
ಳೊಳಕೊಂಡು ವಿಶ್ವತೋಮೂರ್ತಿಯೆಂದೆನಿಸಿ ನಿ |
ಶ್ಚಲತತ್ತ್ವನಾಗಿ ಶ್ರುತಿತತಿಗೆ ನಿಲುಕದ ವಿರಾಡ್ರೂಪದೋಲಗದ ಮನೆಯ ||
ನೆಲೆಯೊಳೊಪ್ಪಂಬಡೆದ ಸಿಂಹವಿಷ್ಟರದ ಕೆಱ |
ದಳತೆಗೊಳವಟ್ಟು ಮಂಡಿಸಿದ್ಯೆ ತ್ರಿಲೋಕಮಱ |
ಯಲಣೋರಣೀಯನುಂ ಮಹತೋಮಹೀಯನುಂ ನೀನೆಂಬುದಗ್ರತೆಯನು ||೬೭||

ಸ್ಥಿರಪದ್ಮಪೀಠಂ ಋಜೂನ್ನ ಖವಪುಸ್ಸ್ಮೃತಾ ।
ಕ್ಷರತತ್ವನರ್ಥಿತಮರುದ್ಗತಿ ವಿವರ್ಧಿತಜ ।
ಠರಪಾವಕಂ ತತಸುಷುಮ್ನಾಂತರಾಲತೇಜೋಮಂಡಲೋಲ್ಲಸಿತನು ॥
ಪರಿಚಿತಾಂತರ್ಜ್ಯೋತಿರಮ್ಯನೆನಿಸಿದ ತಪ್ಪೋ ।
ವರನಾದೊಡೇಂ ತನ್ಮನೋಗತಿಗೆ ಪ್ಯೊಗುಡದೆ ।
ಮೆಱೆದಪ್ಪೈ ಪೊಗಟ್ಟಿನಂ ನಿಗಮಾಳಿಯೊಲ್ದತ್ಯತಿಷ್ಠದ್ದಶಾಂಗುಲವೆನೆ ॥೬೮॥

ರಾಗಭೋಗಂಗಳಂ ಕೆಡೆಯೊದೆದು ನಿಖಿಲನಿಗ ।
ಮಾಗಮದೊಳಾಡಿ ದೈಹಿಕಗುಣವಿತಾನಮಂ ।
ನೀಗಿ ಕಳೆದಾತ್ಮಸಂಸ್ಕರಣದಿಂ ಚಿತ್ಪದಸಮಾಕಲಿತಚಿತ್ತರೆನಿಸಿ ॥
ಯೋಗವಿಧಿಯಿಂ ನಡೆದು ಹೃದಯಾರವಿಂದಮಂ ।
ಬೀಗಿಸಿದೆವೆಂದತಿವಿಜೃಂಭಿಸಿದೊಡಧ್ಯಾತ್ಮ ।
ಯೋಗಿಗಳದೇಂ ಭವತ್ಪದಪದ್ಮಮಂ ತಿಳಿಯಲಾರ್ತರೇ ದೇವದೇವ ॥೬೯॥

ವಿಷಯದುರ್ವಿಷಯಂಗಳೊಳ್ ಬೆರೆಯದೇಕಾಗ್ರ ।
ದೆಸಕಮಂ ತಳೆದು ರಿಪುವರ್ಗರಿಪುವರ್ಗಮಂ ।
ದೆಸೆಗೆಡಿಸಿ ಸಂಗತಸುಹೃತ್ಸುಹೃದರಿಂ ಪರಮಜೀವಸಮಭಾವದಿಂದ ॥
ಪೊಸರಾಜಯೋಗಘನಯೋಗರಾಜ್ಯಮನೆ ಸಾ ।
ಧಿಸವೇಟ್ಟುದಖಿಲಸಾಧುಗಳೆಂದು ತಾಯ್ಗೆ ಬೋ ।
ಧಿಸುವ ನೆವದಿಂದಱಿಪಿದೈ ಸಾಂಖ್ಯತತ್ತ್ವಮಂ ಮಹಿಯೊಳ್ ಮುನೀಂದ್ರನಾಗಿ ॥

ತುಂಬಿ ತುೞ್ದೊಳರೆ ಘನಪುಷ್ಕಲಾವರ್ತಕಮು ।
ಟುಂಬಮಂಭಃಪ್ರಣಿಧಿನಿಚಯಸಂಗಮಕೋಟಿ ।
ದಂಭೋಳಿಘೋಷಭೀಷಣರವಂ ಕೂಡೆ ಸಂವರ್ತಝುಂಝಾವಾತದ ॥
ಗಂಭೀರನಾದಕೆತ್ತೆತ್ತದೆಸೆ ಕಮಠದಿ ।
ಕ್ಕುಂಭಿಕುಂಭೀರವರ್ ಪೇಱನೆ ಮಿಟಿರ್ದ ಕ ।
ರ್ಬ್ಬಾಂಭೋಧಿಜಳದೊಳ್ ಝಷಾಕೃತಿಯೊಳೆತ್ತಿದ್ದೆ ವೇದಮಂ ವೇದವೇದ್ಯ ॥೭೧॥

ವಿಲಯಜಲನಿಧಿಯೊಳೆಲೆವಾಸಿನೊಳ್ ನಲಿವ ನಿ ।
ಶ್ಚಲಗೆ ನೀರಾವಾಸಮಿದು ಪೊಸತೆ ಮೇಣಬ್ಧಿ ।
ನಿಲಯನಲ್ಲಾ ಬಣಗುವೆಟ್ಟಮಂ ತಳೆವುದೇನರಿದೆ ವಿಶ್ವಂಭರಂಗೆ ॥

ಗಟಿಗೆಗೊಂದೊಂದು ರೂಪಿನೊಳಾಡಿ ತೋರ್ಪರ್ಗೀ ।
ಜಲಜಂತುಲೀಲೆ ಸೋಜಿಗವೆ ಪೇಟೆಂಬಿನಂ ।
ಜಲಧಿಮಥನದೊಳಂದು ಬೆನ್ನೊಳಾಂತೈ ಗಿರಿಗರಿಷ್ಠಮಂ ಕಮಠನಾಗಿ ॥೭೨॥

ಸುರರೊಳ್ ಪೊಣರ್ದುರ್ಜ ಸದೆದಾಶಾಧಿನಾಯಕರ ।
ಪುರದೊಳಲ್ಲಲ್ಲಿ ತಿರಿದವರನೆಣ್ಮೊಲೆಗಳೊ ।
ಳಿಱುಬಿನೊಳ್ ತೂಱು ಜಗದೇಕಭೀಕರನೆನಿಸಿ ಕಟ್ಟುಗ್ರದರ್ಪದಿಂದ ॥
ಧರಣಿಯಂ ಸುತ್ತಿ ಕಕ್ಷದೊಳೌಂಕಿ ಬಿಡದೆ ಮುಂ ।
ಬರಿದು ಪಾತಾಳಮಂ ಪುಗುವ ಹೇಮಾಕ್ಷನಂ ।
ತರಿದಿಕ್ಕಿ ದಯದಿನುದ್ಧರಿಸಿದೈ ಧರೆಯನಾದಿವರಾಹರೂಪದಿಂದ ॥೭೩॥

ಛಿಳಿಛಿಟಿಸ್ವನಕೆ ದಿಕ್ತಟವೊಡೆಯೆ ಕಮಲಭವ ।
ನಿಳಯಂ ಪೆಳರ್ದದಿರೆ ರಸೆಯುಂ ರಸಾತಳಮು ।
ಮಳವಟಿಯೆ ದನುಜರೆರ್ದೆ ಬಿಱಿಯೆ ಸುರರಳ್ಕೆ ಪೊಣ್ಡಾಮಹಾಡಂಬರದೊಳು ॥
ವಿಲಯಾಂತಭೈರವನ ಭೈರವಮನಾಂತು ವೆ ।
ಗ್ಗಳಿಸಿ ಬಜ್ಜರದ ಮಾಕಂಭಮಂ ಸೀಳ್ದೊಗೆದು ।
ಸಲಹಿದೈ ಪ್ರಹ್ಲಾದನಂ ಸುಜನಜನಶಿರೋಮಣಿಯಂ ನಖೋಗ್ರಪಾಣೀ ॥೭೪॥

ಉಟ್ಟ ಪೀತಾಂಬರದ ನಿಱಿಯ ನುಣ್ಪಿಡಿದ ಪಣೆ ।
ಗಿಟ್ಟ ಪುಂಡ್ರತ್ರಯದ ತುಳಸಿಮಾಲಿಕೆಯೊಡನೆ ।
ತೊಟ್ಟ ನೀವೀತಾಗ್ರದೆಸೆವ ಕೃಷ್ಣಾಜಿನದ ಮೇಲ್ವಾಯ್ದ ಚೆಲ್ವಿನಿಂದ ॥
ಪುಟ್ಟವಾಮನನಾಗಿ ಬೇಡಿ ಭೂಮಿಯನೆರಡು ।
ದಟ್ಟಡಿಯೊಳೊಳಕೊಂಡು ಬಲಿಯಂ ರಸಾತಳಕೆ ।
ಮೆಟ್ಟಿ ಪಾಲಿಸಿದೈ ಸುರರ್ಕಳಂ ದನುಜಭೀತರ್ಕಳುಮನಟ್ಟುಱಿಂದ ॥೭೫॥

ಭುವನೈಕವಿಕ್ರಮಂ ಬಹುಶತಕಬಾಹುರಾ ।
ಜಿವಿಚಿತ್ರನಪ್ರತಿಮಸುಪ್ರತಾಪಂ ಮಹಾ ।
ಹವಧುರಂಧರನುಮಾಗುರ್ಬಿ ದಿಗ್ದೇಶಮಂ ಗೆಲ್ದೊಂದೆ ಬೆಳ್ಗೊಡೆಯೊಳು ॥
ಭುವನಮಂ ತಾಳ್ದಂತುಗುರ್ವಿಸಿದ ಕೃತವೀರ್ಯ ।
ಭವನಂ ತದನ್ವಯೋದ್ಭವರನೆಲ್ಲಾರಾಜ ।
ನಿವಹಮಂ ಕೂಡೆ ತಡೆಗಡಿದೊಡನೆ ಪೊಡವಿಯಂ ಪೊರೆದೈ ಕುಠಾರಧಾರೀ ॥೭೬॥

ಪದಘಾತಕವನಿಯುತ್ಕಂಪಿಸೆ ಕೆದರ್ದ ಜಟೆ ।
ಯುದಿತರವಿಶಶಿಗಳಂ ಮುಸುಕೆ ಬಿಡುಗಣ್ಗಳಿಂ ।
ದುದಿರ್ವ ಕೆಂಗಿಡಿ ಘೋರಮಾಗೆ ಜೋಲ್ಮುಡಿಯ ಗಂಗಾಂಬುಧಾರಾಸಾರದ ॥
ಹದನುಗ್ರವಿಲಯದುತ್ಪಾತಮನೊಡರ್ಚಲ ।
ಗ್ಗದ ವ್ಯಕನಳುರ್ಕೆಗೋಡುವ ಮೃಡನನೋವಿದ್ಕೈ ।
ಸದೆದ್ಕೈ ತದುಗ್ರಬಲನಂ ಪಾರ್ವನಾಗಿ ನೀಂ ಕಪಟಪ್ರಬಂಧದಿಂದ ॥೭೭॥

ಅಜನಾಗಿ ಬಹುಲಕ್ಷಮಿತಜೀವಯೋನಿಜ ।
ವ್ರಜಮಂ ವಿಶುದ್ಧಮಾಯಾಬೀಜದೋಜೆಯಿಂ ।
ಸೃಜಿಸಿ ಬಿತ್ತರಿಸಿ ಬಂಧಿಸಿ ಕರ್ಮಪಾಶದಿಂ ಪೊರೆದು ಹರಿರೂಪಿನಿಂದ ॥
ನಿಜಲೀಲೆಯೊಳ್ ಚತುರ್ಮುಖದೀರ್ಘದೇಹದಶ ।
ಭುಜಲಸಿತಕಾಲಾಗ್ನಿರುದ್ರಾವತಾರದಿಂ ।
ತ್ರಿಜಗಮಂ ದಹಿಪ ಚಿತ್ರಚರಿತ್ರನೀಶ್ವರಂ ನೀನಲ್ತೆ ದಾನವಾರೀ ॥೭೮॥

ಅವನಕಲಂಕತೇಜೋರಾಜಿಯಿಂ ಪೊದ ।
ಟ್ದೀವಿಧುವಿಭಾಕರರ್ ಬೆಳಗುವರ್ ತ್ರಿಜಗಮಾ ।
ಯ್ತಾವನಿಂದಾವನಾಜ್ಞೆಗೆ ಸಂದು ವರ್ತಿಪಳ್ ಮಾಯೆ ನಿಚ್ಚಂ ಪೇಳರ್ದು ॥
ಆವನಮಲಪ್ರಭಾವದೊಳಬ್ಧಿ ನಿಲ್ಗುಮಾ ।
ಸ್ಥಾವರಚರಂಗಳಳ್ಕಾಡುಗುಂ ಬಾಬ್ಗುಮಾ ।
ದೇವಂ ಬೃಹತ್ಪ್ರಭಂ ಭುವನೈಕವಲ್ಲಭಂ ನೀನಲ್ತೆ ರಾವಣಾರೀ ॥೭೯॥

ಕ್ಷೀರಸಾಗರನಿಲಯನುತ್ತರಿಸಲೀಬಣಗು ।
ನೀರಸಾಗರಕೇಕೆ ಸೇತು ಮಿಗೆ ಜಗದ ಸಂ ।
ಸಾರಸಾಗರಮನರೆಯಟ್ಟುವ ಮಹಾತ್ಮಂ ನೆರಂಬಾರಲೇಕೆ ಖಳರ ॥
ವಾರಸಾಗರದೊಡಸಿದಿರ್ಚ ಜೀವಂಗೊಳಲ ।
ಪಾರಸಾಗರಮಲ್ತೆ ನಿನ್ನುರುಮಹಿಮೆ ದಯಾ ।
ಸಾರಸಾಗರಸಗರಕುಲಸಾಗರೇಂದುಶರಣೇಂದಿರಾವರವಲ್ಲಭಾ ॥೮೦॥

ಜಯ ಜಯತುಲಾನುಜಾತಾನಂದಮೂರ್ತಿ ಜಯ ।
ಜಯ ಪಾರಿಜಾತನಂದನರುಚಿರವಂದ್ಯ ಜಯ ।
ಜಯ ಮಹಾಘಾಗೌಘಭೇದನಾಶ ನಿರಾಮಯ ಮಹಾದಿದೇವಾಂಚಿತ ॥

ಜಯ ಜಯತುಲಾನುಜಾತಾನಂದಮೂರ್ತಿ ಜಯ ।
ಜಯ ಪಾರಿಜಾತನಂದನರುಚಿರವಂದ್ಯ ಜಯ ।
ಜಯತು ಜಯವೆಂದಿಂತು ಪೊಗಟುತೆ ಯತೀಂದ್ರರ್ ಪುನಃಪ್ರಣಾಮಂಗೆಯ್ದರು॥

ಕೆಡೆದುದನ್ನೆಗಮಸುರದಾರುಣನ ರಾವಣನ ।
ಕಡುಬಾಧೆಗಸುವನೆಡೆಗೊಟ್ಟು ಕೆಟ್ಟುಮ್ಮಳಕೆ ।
ಕಡಲಾಗಿ ಬಾಡಿ ಬಸವಟಿದುಟಿದಳದೊರ್ಳದೆರ್ದೆ ಗುಂದಿ ನೊಂದು ಬೆಂದು ॥
ಬಡವಾಗಿ ಬಾಗಿ ಬಾಗುಡೊಳಟ್ಟು ಬತ್ತಿದವ ।
ರೊಡಲ ಭಾರಮನಾನಲಾರದಿರೆಮನೆ ಪೊದ ।
ಟ್ಟಡಿಯೊಳಮರವ್ರಜಂ ಕಾದ್ಯೆ ಕೃಪಾಬ್ಧಿರಾಮಾ ಇಂದಿಗೆಮ್ಮನೆನುತ　　॥೮೨॥

ನೊಂದೆವಳುಕಿದೆವಗಿದೆವಟಿದೆವುಟಿದೆವು ಬೆದೆಯೊ ।
ಳೊಂದಿದೆವು ಕಂದಿದೆವು ಕುಂದಿದೆವು ಬಗೆಗೆಟ್ಟು ।
ಬೆಂದೆವು ಬಿಗುರ್ತೆವಡಿಗಡಿಗೆ ಬಾಯ್ಬೊಯ್ದು ಬಿಸುಸುಯ್ದು ಬ್ಬೆದೆವು ಬಿದಿಯನು ॥
ಬಂದಣದೆ ಬಾಪ್ಪೆವಿನ್ನೆಗಮಕಟ ದಾನವಮ ।
ದಾಂಧನುಪಹತಿ ಸಾಕು ಸಾಕು ಕಾದ್ಯೆಯೆಮ್ಮ ।
ತಂದೆ ದಯೆಗೆಯ್ದುಟುಹಿದ್ಯೆ ನಿಜಾಶ್ರಿತರನಿಂದಿಗೆ ಕೃತಾರ್ಥರೆವೆಂದರು　　॥೮೩॥

ಧರೆಯೊಳ್ ಧರಾಮರಜನಂ ನೆಗಟ್ವ ಜನ್ನದೋ ।
ಗರವೊಗರುಗೊಂಡುದಾವಗಮಾಳ್ದ ಚಿಂತೆಗೊಡ ।
ಲುರಿದು ಕೃಶಮಾಗಿ ಸೊಬಗಟಿದೆಮ್ಮ ನಿರ್ಜರತೆ ನಾಣ್ನುಡಿಗೆ ಪಕ್ಕಾದುದು ॥
ಸೆಱೆಯೊಳುಡುಗಿರ್ದು ರವಿಶಶಿಗಳಂ ಕುಱುಪಿಡುವೊ ।
ಡಱಿಯದಾದೆವು ದೇವ ಖಳನವನುಪದ್ರವಂ ।
ಪರಿಹಾರಮಾದುದಿನ್ನೀ ಬನ್ನವೊಳವೆಯದಱಿಂ ಕೃತಜ್ಞರೆವೆಂದರು　　॥೮೪॥

ಸುರಮುನಿಗಳೋದುವ ಪುರಾಣಘೋಷಶ್ರವಣ ।
ದಿರವೆತ್ತ ರಕ್ಕಸರ ಕರ್ಕಶರವದ ಭಯಂ ।
ಕರಕೆ ಪಡಲಿಟ್ಟ ದುಸ್ಥಿತಿ ಯೆತ್ತಲಮರ್ದುಮನಮರ್ದಿಗಂಟಿ ನಲ್ಮೆಯಿಂದ ॥
ಸುರಭಿಯತ್ತಣಿಸಿಷ್ಟಭೋಜನಮನುಂಡ ಮೆಯ್ಸಿ ।
ಸಿರಿಯೆತ್ತ ಖಳನ ಸೆಱೆವನೆಯ ತಣ್ಣೂಡೆತ್ತ ।
ಮಱೆಯಲವ್ಮೆವು ಜೀಯ ಸಾಕದೀಬನ್ನಮಿನ್ನೊಳವೆ ಧನ್ಯರೆವೆಂದರು　　॥೮೫॥

ಪೆಂಡಿರನುಟಿದು ಗುರುಹಿರಿಯಬಂಧುಭಾಂಧವರ ।
ತಂಡಮನಗಲ್ದೆಣೆಯರಂ ತೊಱೆದು ದೆಸೆದೆಸೆಯ ।
ನಂಡಲೆದಳವುಗುಂದಿ ಪಸಿವಿಂ ಪಿಪಾಸೆಯಿಂ ಸ್ಥಾನವಿಭ್ರಷ್ಟರೆನಿಸಿ ॥
ಕಂಡಕಂಡವರ ಕೆಳೆಗೆಳಸಿ ಬಯಲಿಗೆ ದಿಗಿಲು ।
ಗೊಂಡು ಗೋಳಾಡಿದೆವಿನ್ನಾಬನ್ನದಿರವ ನೀ ।
ನುಂಡುಂಡು ಕಂಡು ರಕ್ಷಿಸಿದೈ ಕೃಪಾಳುಗಳ ದೇವ ಶರಣಾಗೆಂದರು ॥೭೬॥

ದುರುಳನಟಿದಂ ಸೆಱೆಗೆ ಸಿಲ್ಕಿ ಪುದುಗಿರ್ದೆನ್ನ ।
ಪರಿವಾರಕಾಯ್ತು ಬಿಡುಗಡೆ ದೇವಸಂಪದಂ ।
ಸುರಸುರಭಿಕಲ್ಪಲತೆಗಿತೆಗಳೊಡನೆನಗೆ ಕೈಸೇರ್ದುದು ಧರಾತಳದೊಳು ॥
ಧರಣಿಯಮರರ ಯಜ್ಞದಾರಂಭಸಂಭ್ರಮಂ ।
ಪರಿಲಸಿತಮಾಯ್ತು ಮನಸಾಭೀಷ್ಟಮೀಯೆಡೆಗೆ ।
ನೆರವೇರಿತಿನ್ನು ಕೃತಕೃತ್ಯನಹೆನೆಂದು ವಾಸವನೆಱಗಿದಂ ಪದದೊಳು ॥೭೭॥

ನಿತ್ಯಪಂಚಾಂಗಪಠನಮನಲಸದೆಸಗಿ ನೈ ।
ಮಿತ್ತಿಕಶುಭಾಶುಭಂಗಳೊಳೊದಗಿ ಜೋಯಿಸಿಗ ।
ವೃತ್ತಿಯಿಂ ದಿನವ ನೂಂಕಿದೆನಾದೊಡೆಂದಾನುಮೊಂದೆಡೆಗನಿಷ್ಟಮುದಿಸೆ ॥
ಮುತ್ತಯಂ ದುರ್ಮುಹೂರ್ತವನೊರೆದನೆಂದವನ ।
ಪತ್ತುಬಾಯಂ ತೆಱೆದು ಕೂಗಿ ಪಲ್ಮಸೆದವಂ ।
ಸತ್ತಟಿದು ಮಣ್ಗೂಡಿದನಕಟ ! ಬರ್ದುಕಿದೆ ಗಡೆಂದಟಿಗಜಂ ಮಣಿದನು ॥೭೮॥

ಸುರರಿಗಭ್ಯುದಯಂ ಸುರೇಶಂಗೆ ವೈಭವಂ ।
ಸುರಮುನೀಂದ್ರರ್ಗೆ ಪರಮಾನಂದಸಂಪದಂ ।
ಸುರರಿಪುಗಳಟಿವು ಭೂಸುರರುಟಿವು ಸಮನಿಸಿತು ನಿನ್ನ ನರನಟನೆಯಿಂದ ॥
ಧರೆಗೆ ಮಂಗಳಮಾಯ್ತು ಮೇಣೆಮ್ಮ ಪರಿತೋಷ ।
ಶರಧಿಗುತ್ಸವಮಾಯ್ತು ಬಹುರೂಪಭೃತ್ತ್ವಮಂ ।
ಮೆಱೆದೆ ನಿನ್ನವತರಣೆ ಲೇಸು ಪೊಸತಾದುದೆಂದಭವನಭಿವಂದಿಸಿದನು ॥೭೯॥

ವಿನಮಿತರನೆತ್ತಿ ಕುಳ್ಳಿರವೇಟ್ದು ಕಾಣ್ಕೆಗಳ ।
ನನಿತುಮಂ ಕೈಕೊಂಡಿದಿರ್ಪರಿದು ನಲವ ಪುರ ।
ಜನಮನಂತಿರವೇಟ್ದು ಸಂತೈಸಿ ವಂದಿಮಾಗಧರನಾಪಾಠಕರನು ॥

ಮುನಿಗಳ ಪೊಗಪ್ಕೆಯುಂಡಲೆಗೆ ಕೆಲದವನಿನಂ |
ದನೆಯ ಮೋಗನೋಡಿ ನಸುನಗುತಾರಪೂದ್ವಹಂ |
ವಿನಯಭಾವಂ ಪೊಣ್ಮಿ ಕರುಣರಸವೊಸಱೆ ಮುಂ ನೆರೆದ ಸಭೆಗಿಂತೆಂದನು ||

ಪರಿಭವಿಸಲಾರ್ಗೆ ಗೋಚರಮಕಟ ಶರಣಜನ |
ಸುರಧೇನುವಂ ವಿಭೀಷಣನಂ ಲಸದ್ಧರ್ಮ |
ನಿರತನಂ ಬಿದಿಯೊಲ್ದು ಸೃಜಿಸದೊಡೆ ಸೇತುಬಂಧದ ಕಜ್ಜದುಜ್ಜುಗದೊಳು ||
ವರುಣಂ ಸಹಾಯಮಾಯದೊಡೆ ನಿಜಸೇನೆ ಸಹಿ |
ತರುಣಜಂ ನೆರವಾಗದೊಡೆ ಲಂಕೆಗೈದಿ ದಶ |
ಶಿರನಂ ಬಲಪ್ರಚುರನಂ ತ್ರಿಭುವನೈಕವಿಕ್ರಮನಂ ಯಮೋಪಮನನು ||೯೧||

ಇಂದುಶೇಖರನ ಕೃಪೆ ಮೊದಲೆಮ್ಮಾಳಾಯ್ತು ದಿವ |
ದಿಂದಿಂದ್ರನೆಡೆಯ ಮಾತಲಿ ಯುದ್ಧಕಾರ್ಯದೊಳ್ |
ಬಂದೊದವಲನುವಾಯ್ತು ತಿಳಿವೊಡನಲಾತ್ಮಜಮರುತ್ಸುತರ ನೆರವೆಮ್ಮೊಳು ||
ಅಂದಿಂದು ವರೆಗೆ ಸಮನಿಸಿತು ನೆರೆದಖಿಳಮುನಿ |
ವೃಂದದಾಶೀರ್ವಾದಮೋವಿತಲ್ಲದೊಡದೇಂ |
ಮಂದಪ್ರತಾಪನೆ ದಶಾಸ್ಯನವನಂ ಗೆಲ್ವೆವೆಂದೊಡಿದು ಚಿತ್ರಮಲ್ತೆ ||೯೨||

ಪರಮಿತ್ರನಾದ ಕತದಿಂದೆಮಗೆ ಮಿತ್ರನಾ |
ತುರಗವಾಹಂ ನಿರೃತಿಯಿಷ್ಟನೆಮ್ಮನ್ವಯದ |
ಪಿರಿಯನಣುಗಂ ಜಗುನೆಯಣ್ಣನುಟಿದಮರರೆಮ್ಮವರೀಸಮಸ್ತನೃಪರು ||
ನೆರೆವೊಬಲರೆಮ್ಮ ಕಾರಿಯಮೆ ಎಮ್ಮಭ್ಯುದಯ |
ದಿರವೆ ನಿಮ್ಮವು ನಿಮ್ಮ ಸರ್ವರುಪಕೃತಿಯಿಂದೆ |
ನೆರೆ ಧನ್ಯನಹೆನೆಂದು ನಿಖಿಲರಂ ದಯದಿನಾದರಿಸಿದಂ ರಾಜಮೌಳಿ ||೯೩||

ಇಂತುಚಿತಮೃದುಮಧುರವಚನರಚನೆಗಳಿಂ ಪು |
ರಾಂತಕಪ್ರಮುಖದೇವರ್ಕಳಂ ಮನ್ನಿಸಿ ಸ |
ಮಂತಖಿಳಮುನಿವರರನಾದರಿಸಿ ಸಾಮಂತಸಂದೋಹಮಂ ಕರುಣಿಸಿ ||
ಮುಂತಿರ್ಪ ಪುರದ ಮನ್ನೆಯರನುಪಚರಿಸಿ ಭೂ |
ಕಾಂತನೆಲ್ಲರ್ಗೆ ಸರಿಯುಡುಗೊಱೆಯನೊಪ್ಪಿಸಿ ದಿ |
ಶಾಂತವಿಶ್ರಾಂತನಿಜಕೀರ್ತಿಯೊಡನವರನೆಲ್ಲಂ ಬಟಿಕ ಬೀಡ್ಕೊಟ್ಟನು ||೯೪||

ನ್ಯಾಯಧರ್ಮವನುಱಿದು ಶಿಕ್ಷೆರಕ್ಷಣೆಗಳಾ |
ಮ್ನಾಯಧರ್ಮವನುಱಿದು ಭಕ್ತಿಭಾವನೆಗಳಾ |
ತ್ಮೀಯಧರ್ಮವನುಱಿದು ಸಾಮಸಂಗ್ರಾಮಂಗಳಾಗವೆನೆ ಧರ್ಮವಱಿತು ||
ರಾಯರೀಬಟಿಯೊಳಿಂತಿರ್ದರಿಲ್ಲೆನೆ ಪೂರ್ವ |
ದಾಯಮಂ ಬಿಡದೆ ಶಕ್ತಿತ್ರಯಂ ತನಗೆ ಸಮ |
ವಾಯಲಕ್ಷಣಮಾಗೆ ಲಕ್ಷ್ಮೀಮನೋಹರಂ ಧರೆಯನಾಳುತ್ತಿರ್ದನು ||೬೫||

ಪೆಡೆಮಣಿಯ ಬೆಳಗು ನಗೆವೊಗದ ಬೆಳಗಂ ಬೆರೆಯೆ |
ನುಡಿಯ ಬಿನ್ನಾಣಮಱುವಿನ ಸಿಱುಗೆಯಂ ಕೂಡೆ |
ಸೆಡೆದ ನವರಸದೊಡನೆ ಭಕ್ತಿರಸವೊಂದೆ ನಾಗೇಂದ್ರಂ ಮುನೀಶ್ವರಂಗೆ ||
ಮುಡಿಯದೀಚರಿತಮೀಬಾಯ್ಗಳಿಂ ಪೇಳ್ದುವೆನೆ |
ಕಡುನೇಹದಿಂದೊರೆದ ಕಥೆಯನತಿಭಕ್ತಿಯಿಂ |
ಬಿಡದೋದಿ ಕೇಳ್ವ ಸಜ್ಜನರಿಗಿಷ್ಟಾರ್ಥಮಂ ಕುಡುವನಾಶ್ರೀರಾಮನು ||೬೬||

ಪಡುಗಡಲ್ಗಡೆಯೊಳೇಬೆಡೆಯಂ ಭೃಗೂದ್ವಹಂ |
ಪಡೆದನದಱೊಳ್ ಸ್ತ್ರೈಪಿಗೆಡೆಯಾಗಿ ಕನ್ನಡದ |
ನುಡಿವೆಣ್ಗೆ ಭರ್ತೃಮಂದಿರಮಾಗಿ ಸುಖಕೆ ಬೀಡಾಗಿ ನಾಡಾಗಿ ಮೆಱೆವ ||
ಉಡುಪಪುರವೆಂಬ ಸುಕ್ಷೇತ್ರಮುಂಟಲ್ಲಿ ಬಾ |
ವಡಿರಂಗಭಟ್ಟನಾತ್ಮಜೆ ಮಹಾಲಕ್ಷ್ಮಿ ಕ |
ನ್ನಡಿತಿ ಚೆಂಗಳದೇವಿ ಪೇಬೆಂದು ಪೇಬೆ ನೆಱೆ ಪೇಳ್ದಳೀಸತ್ಕೃತಿಯನು ||೬೭||

ಇಂತು ಶ್ರೀರಾಮಪಟ್ಟಾಭಿಷೇಕದೊಳ್ ಐದನೆಯ ಸಂಧಿ
ಮುಗಿದುದು.

ಶ್ರೀರಾಮಪಟ್ಟಾಭಿಷೇಕಂ ಸಂಪೂರ್ಣಮಾದುದು.

PRINTED AT THE WESLEYAN MISSION PRESS, MYSORE CITY.

# ಶ್ರೀರಾಮ ಪಟ್ಟಾಭಿಷೇಕದ ಟೀಕೆ.

---

## ನಾಂದೀ ಸಂಧಿ.

ಗ್ರಂಥಾದಿಯಲ್ಲಿ ಮಾಡುವ ಮಂಗಳಪದ್ಯಕ್ಕೆ ನಾಂದೀಪದ್ಯವೆಂದು ಸಾಮಾನ್ಯವಾಗಿ ಕರೆಯುವುದುಂಟು. ಈ ಸಂಧಿಯಲ್ಲಿರುವ ಪದ್ಯಗಳೆಲ್ಲವೂ ಮಂಗಳ ಪದ್ಯಗಳಾಗಿರುವುದರಿಂದ ಇದಕ್ಕೆ ನಾಂದೀಸಂಧಿಯೆಂದು ಹೆಸರಿಡಲ್ಪಟ್ಟಿದೆ.

ಪದ್ಯಸಂಖ್ಯೆ

೧ ಕವಿಯು ಈ ಪದ್ಯದಲ್ಲಿ ಶ್ಲೇಷೆಯಿಂದ ಕಥಾನಾಯಕನಾಗಿಯೂ ವಿಷ್ಣುವಿನ ಅವತಾರವಾಗಿಯೂ ಇರುವ ಶ್ರೀರಾಮನನ್ನೂ, ತನಗೆ ಉಪಾಸ್ಯದೇವತೆಯಾದ ಶಿವನನ್ನೂ ಕುರಿತು ಪ್ರಾರ್ಥನೆ ಮಾಡುತ್ತಾಳೆ. ಹೇಗೆಂದರೆ :—

ಶ್ರೀರಾಮಪರವಾಗಿ :—ಶ್ರೀಮದ..ಕೈರವಾಬ್ಜಂ—ಶ್ರೀಮತ್-ಸಂಪದ್ಯುಕ್ತಳಾದ, ಅಚಲಾತ್ಮಜಾ-ಭೂಪುತ್ರಿಯಾದ ಸೀತೆಯ, ಆನನ-ಮುಖವೆಂಬ, ಕೈರವ-ನೈಯ್ದಿಲೆಗೆ, ಅಬ್ಜಂ-ಚಂದ್ರನಾದ, ಎಂದರೆ ಚಂದ್ರನು ಕೈರವನನ್ನು ತನ್ನ ದರ್ಶನದಿಂದ ಅರಳಿಸುವಂತೆ ಸೀತೆಯ ಮುಖವನ್ನು ಅರಳಿಸುವವನು, ಸೀತೆಗೆ ಸಂತೋಷಕರನು ಎಂದರ್ಥ. ನಿರಾಮಯಂ-ಅನಿಷ್ಟಗಳಿಂದ ಬಿಡಲ್ಪಟ್ಟ, ಅಪಾಯರಹಿತನಾದ ; ದಿವ್ಯಕೇಶಂ-ಶ್ರೇಷ್ಠವಾದ, ಮನೋಹರವಾದ ಕೇಶಗಳುಳ್ಳ ; ರಾಜಶೇಖರಂ-ರಾಜರಿಗೆಲ್ಲಾ ಶಿರೋಭೂಷಣನಾದ ; ಸಾಮಗಾನಪ್ರಿಯಂ-ಸಾಮಗಾನದಲ್ಲಿ ಆಸಕ್ತನಾದ ; ಹರಿಸುತಾಹಿತಂ—ಹರಿಸುತ-ಇಂದ್ರಸುತನಾದ ವಾಲಿಗೆ, ಅಹಿತಂ-ಶತ್ರುವಾದಂಥ ; ಅಹೀನಾಲಂಕೃತಾಂಗಂ-ಅಹೀನವಾಗಿಯೂ ಎಂದರೆ ಸುಲಕ್ಷಣವಾಗಿಯೂ ಅಲಂಕೃತವಾಗಿಯೂ ಇರುವ ಅಂಗಗಳುಳ್ಳಂಥ ; ಶಿವಂ-ಮಂಗಳಕರನಾದ ; ಕಾಮಮುಖ್ಯಾರಿವರ್ಗಧ್ವಂಸಿ-ಕಾಮವೇ ಮುಖ್ಯವಾದ ಅರಿಷಡ್ವರ್ಗಗಳನ್ನು ನಾಶಮಾಡಿರುವ ಎಂದರೆ ಜಿತೇಂದ್ರಿಯನಾದ ; ಭೂತಪತಿ-ಜೀವರಾಶಿಗಳಿಗೆಲ್ಲಾ ಸ್ವಾಮಿಯಾದ (ವಿಷ್ಣುವಿನ ಅವತಾರವಾಗಿರುವುರಿಂದ ;) ಭೀಮವಿಕ್ರಮಿ-ಭಯಂಕರವಾದ ಪರಾಕ್ರಮವುಳ್ಳ ; ಪುಣ್ಯಜನವಂದಿತಂ-ರಾಕ್ಷಸನಾದ ವಿಭೀಷಣನಿಂದ ನಮಸ್ಕರಿಸಲ್ಪಟ್ಟ ಅಥವಾ ಸುಕೃತಿಗಳಿಂದ ವಂದಿಸಲ್ಪಟ್ಟ ; ಗೋತ್ರೇಶ್ವರಂ—ಗೋತ್ರಾ-ಭೂಮಿಗೆ ಈಶ್ವರಂ-ಪತಿ,

ಎಂದರೆ ರಾಜನಾದ; ಮಂಗಳಂ-ಮಂಗಳಕರನಾದ ; ರಾಮಂ-ಶ್ರೀರಾಮನು ; ಕಾಮಿತಾರ್ಥಂಗಳಂ-ಬೇಡಿದ ವಸ್ತುಗಳನ್ನು ಎಮಗೆ ಸದಾ-ಸರ್ವಕಾಲದಲ್ಲಿ ಯೂ ಒಲಿದು ಈಗೆ-ಕೊಡಲಿ ;

ಶಿವಪರವಾಗಿ :—ಶ್ರೀಮದ...ಕ್ಶೈರವಾಬ್ಜಂ-ಅಚಲಾತ್ಮಜಾ-ಪಾರ್ವತಿಯ... ದಿವ್ಯಕೇಶಂ-ಆಕಾಶಸಂಬಂಧವಾದ ಕೇಶವುಳ್ಳಂಥ (ಶಿವನು ವ್ಯೋಮಕೇಶನಾದುದರಿಂದ) , ರಾಜಶೇಖರಂ-ಚಂದ್ರನನ್ನು ಶಿರೋಭೂಷಣವಾಗುಳ್ಳ ; ಹರಿಸುತಾಹಿತಂ—ಹರಿಸುತ-ವಿಷ್ಣುವಿಗೆ ಪುತ್ರನಾದ ಮನ್ಮಥನಿಗೆ ಶತ್ರುವಾದಂಥ ; ಅಹೀನಾಲಂಕೃತಾಂಗಂ-ಅಹಿ-ಸರ್ಪಗಳಿಗೆ, ಇನ-ಸ್ವಾಮಿಗಳಾದ ಮಹಾನಾಗಗಳಿಂದ ಅಲಂಕೃತವಾದ ಅಂಗಗಳುಳ್ಳ ಎಂದರೆ ಸರ್ಪಭೂಷಣನಾದ ; ಕಾಮಮುಖ್ಯಾರಿವರ್ಗಧ್ವಂಸಿ-ಮನ್ಮಥನೇ ಮೊದಲಾದ ಅನೇಕರಾದ ಅರಿಗಳನ್ನು ಧ್ವಂಸಮಾಡಿದಂಥ ; ಭೂತಪತಿ-ಭೂತಗಣಗಳಿಗೆಲ್ಲಾ ಸ್ವಾಮಿಯಾದಂಥ ; ಪುಣ್ಯಜನವಂದಿತಂ-ಕುಬೇರನಿಂದ ವಂದಿತನಾದಂಥ ; ಸದಾರಾಮಂ-ಸತ್ಪುರುಷರಿಗೆಲ್ಲಾ ಆರಾಮಸ್ಥಾನವಾದಂಥ ; ಗೋತ್ರೇಶ್ವರಂ-ಗಿರೀಶನಾದ, ಎಂದರೆ ಕೈಲಾಸಪತಿಯಾದ, ಶಿವಂ-ಶಿವನು, ಕಾಮಿತಾರ್ಥಂಗಳಂ ಎಮಗೆ ಈಗೆ.

೨ ವಿಷ್ಣುವು ಶೇಷಶಾಯಿಯಾದುದರಿಂದ ಶೇಷನನ್ನೂ, ಶಿವನು ಕೈಲಾಸವಾಸಿಯಾದುದರಿಂದ ಕೈಲಾಸಪರ್ವತವನ್ನೂ ಶ್ಲೇಷೆಯ ಮೂಲಕ ಈ ಎರಡನೆಯ ಪದ್ಯದಲ್ಲಿ ಅನಂತರ ವರ್ಣಿಸುತ್ತಾಳೆ.

ಶೇಷನ ಪರವಾಗಿ ಅರ್ಥ :—ರಾಗ..ಮಾಂಗಂ-ಪದ್ಮರಾಗಮಣಿಗಳ, ರುಚಿ-ಕಾಂತಿಯಿಂದ ರಾಜಿತ-ಶೋಭಾಯಮಾನವಾದ ಉತ್ತಮಾಂಗಂ-ಶಿರಸ್ಸುಗಳುಳ್ಳ ; ಸುಪುನ್ನಾ..ಪದಂ—ಸುಪುನ್ನಾಗ-ಶ್ರೇಷ್ಠನಾದ ಪುನ್ನಾಗನು, ಅಚ್ಛ-ಬಿಳುಪಾದ ಪುಂಡರೀಕನು ಇವರೆಂಬ ನಾಗಶ್ರೇಷ್ಠರಿಂದ ಆಕಲಿತ-ಸೇವಿಸಲ್ಪಟ್ಟ ಪದಂ-ಪಾದವುಳ್ಳಂಥ ; ಅಮಿತ..ಶ್ರಯಂ—ಅಮಿತ-ಅನೇಕವಾದ, ಭೋಗ-ಹೆಡೆಗಳಿಗೆ ಯೋಗ್ಯಸ್ಥಾನವಾಗಿರುವ ; ಭುವನಗರ್ಭಂ-ಲೋಕಗಳನ್ನೆಲ್ಲಾ ಶಿರಸ್ಸಿನ ಗರ್ಭಸ್ಥಾನದಲ್ಲಿ ಉಳ್ಳ ; ವಂಶಶೋಭಿತಂ-ಬೆನ್ನುಮೂಳೆಗಳಿಂದ ಅಲಂಕೃತನಾದ; ಹೈಮಕಟಂಕಂ-ಶರೀರದ ಉದ್ದಕ್ಕೂ ಸ್ವರ್ಣದಂತಿರುವ ಕಟ್ಟುಗಳುಳ್ಳ; ರಾಗರಸಯುತಂ-ಸಂಗೀತರಾಗಗಳಲ್ಲಿ ಆಸಕ್ತಿಯುಳ್ಳ, ಅಥವಾ ಮದಿರಾದಿರಸಗಳಿಂದ ವ್ಯಾಪ್ತನಾಗಿರುವ ; ಅಮಲಘನರೂಪಂ-ಬಿಳುಪಾದ ಮೋಘದ ರೂಪವುಳ್ಳಂಥ ಎಂದರೆ ಬಿಳುಪಾದ ಶರೀರವುಳ್ಳ ; ಅಚಲಂ-ಚಲನವಿಲ್ಲದೆ ಸ್ಥಿರನಾಗಿರುವ; ಸುರಾ..ಪ್ರದೇಶಂ-(ಸುರಾಗಾ ಮಾ ಯಸ್ಯ ಸಃ ಸುರಾಗಮಃ ಎಂದರೆ)

ಅನುರಾಗವುಳ್ಳ ಲಕ್ಷ್ಮಿಯೊಡನೆ ಕೂಡಿರುವ ವಿಷ್ಣು, ಅವನಿಂದ ಉನ್ಮೀಲಿತ-ಪ್ರಕಾಶಿತವಾದ ಪ್ರದೇಶಂ-ಉತ್ಸಂಗ ಪ್ರದೇಶವುಳ್ಳ; ನಿರ್ಜರಾಗರಂ-ಜರೆಯೆಂಬ ಗರ-ವಿಷದಿಂದ ಬಿಡಲ್ಪಟ್ಟ ಎಂದರೆ ಮುಪ್ಪಿಲ್ಲದಂಥ, ಅಥವಾ ಜರೆಯೂ ವಿಷವೂ ಇಲ್ಲದಂಥ; ಭೂಧರಂ-ಭೂಮಿಯನ್ನು ಹೊತ್ತಿರುವ ಮಹಾಶೇಷನು, ಅನಿಶಂ-ಯಾವಾಗಲೂ ಎಮ್ಮ ಅಖಿಳರ, ಅಭೀಷ್ಟಮಂ-ಇಷ್ಟಾರ್ಥವನ್ನು, ಕೂರ್ಮೆಯಿಂ-ಪ್ರೀತಿಯಿಂದ ಒಡರ್ಚುಗೆ-ಉಂಟುಮಾಡಲಿ!

ಕೈಲಾಸಪರವಾದಾಗ ಅರ್ಥ:—ರಾಗ..ಮಾಂಗಂ-ಗೈರಿಕಾದಿಧಾತುಗಳು ಮಣಿಗಳು, ಇವುಗಳ ಕಾಂತಿಯಿಂದ ರಂಜಿತವಾದ ಶಿಖರಗಳುಳ್ಳ; ಸುಪು....ಪದಂ—ಸುಪುನ್ನಾಗ-ಗಜಶ್ರೇಷ್ಠಗಳು, ಅಚ್ಛ-ಕರಡಿಗಳು,ಪುಂಡರೀಕ-ಹುಲಿಗಳು, ಇವುಗಳಿಂದ ಆಕಲಿಕವಾದ, ಪದ-ತಪ್ಪಲುಗಳುಳ್ಳ, ಅಥವಾ ಸು-ಒಳ್ಳೆಯ, ಪುನ್ನಾಗ-ಸುರಹೊನ್ನೆ, ಅಚ್ಛಪುಂಡರೀಕ-ಬಿಳಿಯ ಕಮಲಗಳಿಂದ ಕೂಡಿರುವ ಸ್ಥಾನಗಳುಳ್ಳ; ಅಮಿತಭೋಗಯೋಗ್ಯಾಶ್ರಯಂ-ಲೆಕ್ಕವಿಲ್ಲದ ಭೋಗಗಳಿಗೆ ತಕ್ಕ ಸ್ಥಾನಗಳನ್ನುಳ್ಳ; ಭುವನಗರ್ಭಂ-ಜಲಾಶಯಗಳನ್ನು ಮಧ್ಯಪ್ರದೇಶದಲ್ಲಿ ಉಳ್ಳ; ವಂಶಶೋಭಿತಂ-ಬಿದುರುಮೆಳೆಗಳಿಂದ ಶೋಭಿತವಾದ; ಹೈಮಕಟಕಂ-ಹಿಮಮಯವಾದ ಸಾನುಪ್ರದೇಶಗಳುಳ್ಳ; ಅಮಲಘನರೂಪಂ, ಅಚಲಂ-ಮೇಲಿನ ಹಾಗೆಯೇ ಅರ್ಥ; ಸುರಾ..ಪ್ರದೇಶಂ—ಸುರಾಗಮ ದೇವದಾರು ವೃಕ್ಷಗಳಿಂದ ಅಥವಾ ಸುರ-ದೇವತೆಗಳ, ಆಗಮ-ಬರೋಣದರಿಂದ ಉನ್ಮೀಲಿತ-ಉತ್ತೇಜಿತವಾದ ಪ್ರದೇಶಗಳುಳ್ಳ; ನಿರ್ಜರಾಗರಂ-ದೇವತೆಗಳಿಗೆ ಮನೆಯಾದ ಎಂದರೆ ವಾಸಸ್ಥಾನವಾದ ಅಥವಾ ಅಳಿವಿಲ್ಲದ ಗಣಿಗಳುಳ್ಳಂಥ, ಭೂಧರಂ-ಕೈಲಾಸಪರ್ವತವು......

ಈ ಪದ್ಯಕ್ಕೆ ಶ್ರೀರಾಮಪರವಾಗಿಯೂ ಅರ್ಥವನ್ನು ಮಾಡಬಹುದು:—ರಾಗ..ಮಾಂಗಂ-ಕೆಂಪುಮಣಿಗಳ ಕಾಂತಿಯಿಂದ ರಾಜಿತವಾದ ಶಿರಸ್ಸುಳ್ಳ; ಸುಪುನ್ನಾಗ..ಪದಂ—ಸುಪುನ್ನಾಗ-ಗಂಡು ಆನೆ, ಅಚ್ಛಪುಂಡರೀಕ-ಶ್ವೇತಚ್ಛತ್ರಿ ಇವುಗಳಿಂದ ಆಕಲಿಕ-ವ್ಯಾಪ್ತವಾದ, ಪದಂ-ರಾಜ್ಯಾಧಿಕಾರವುಳ್ಳ; ಅಮಿತ..ಶ್ರಯಂ-ಅಮಿತಭೋಗರಾದ ಯೋಗಿಗಳಿಗೆ ಆಶ್ರಯನಾದ; ಭುವನಗರ್ಭಂ-ಭುವನವನ್ನು ಗರ್ಭದಲ್ಲಿ ಧರಿಸಿರುವ, ಎಂದರೆ ಪ್ರಳಯಕಾಲದಲ್ಲಿ ಜಗತ್ತೆಲ್ಲವನ್ನು ಹೊಟ್ಟೆಯಲ್ಲಿ ಇಟ್ಟುಕೊಂಡು ಕಾಪಾಡುವ; ವಂಶಶೋಭಿತಂ-ತನ್ನವಂಶಕ್ಕೆ ಕೀರ್ತಿಯನ್ನು ತಂದ; ಹೈಮಕಟಕಂ-ಚಿನ್ನದ ಬಳೆಗಳನ್ನು ಧರಿಸಿರುವ; ರಾಗರಸಯುತಂ-ಆಶ್ರಿತರ ವಿಷಯದಲ್ಲಿ ಪ್ರೀತಿರಸದಿಂದ ಕೂಡಿದ;

ಅಮಲ..ರೂಪಂ-ದೋಷರಹಿತವಾದ ಮೇಘದಂತೆ ರೂಪ-ಶರೀರವುಳ್ಳ ಎಂದರೆ ನೀಲಮೇಘಶ್ಯಾಮನಾದ ; ಅಚಲಂ-ಸ್ಥಿರಚಿತ್ತನಾದ ; ಸುರಾ..ಪ್ರದೇಶಂ-ದೇವತೆಗಳ ಬರುವಿಕೆಯಿಂದ ಅಲಂಕೃತವಾದ ಆಸ್ಥಾನವುಳ್ಳ ; ನಿರ್ಜರಾಗರಂ-ನಿರ್ಜರರಾದ ದೇವತೆಗಳಿಗೆ ಆಶ್ರಯಸ್ಥಾನವಾದಂಥ ; ಭೂಧರಂ-ಭೂಭಾರವನ್ನು ವಹಿಸಿದ ಶ್ರೀರಾಮನು....

೩. ಶ್ರೀಶಂಕರಂ ಎಂಬುದಕ್ಕೆ ಶ್ರೀಶಂ + ಕರಂ ಎಂದು ಪದವಿಭಾಗ ಮಾಡಿದರೆ ಲಕ್ಷ್ಮೀಪತಿಯಾದ ವಿಷ್ಣುವು, ಕರಂ-ಹೆಚ್ಚಾಗಿ ಎಂದರ್ಥವಾಗುತ್ತದೆ ; ಸಮಸ್ತ ಪದವಾದರೆ ಶಿವನು ಎಂದರ್ಥವಾಗುತ್ತದೆ. ಈ ಪದ್ಯದಲ್ಲಿ ಶ್ಲೇಷೆಯಿಂದ ಶಿವನನ್ನೂ ವಿಷ್ಣುವನ್ನೂ ಸ್ತುತಿಸಿದ್ದಾಳೆ.

ಉಭಯಪರವಾಗಿಯೂ ಸಮಾನಾರ್ಥಗಳಾದ ವಿಶೇಷಣಗಳು :—ಮಲವಿನಾಶಂ-ಭಕ್ತರುಗಳ ಪಾಪಗಳನ್ನು ನಾಶಮಾಡುವಂಥ, ಬಾಡಬಾಶ್ರಯಂ-ಬ್ರಾಹ್ಮಣರಿಗೆ ಆಶ್ರಯನಾದಂಥ, ಸತ್ವಸಂಕುಲಯುಕ್ತಂ-ಸತ್ವಗುಣ ಪರಿಪೂರ್ಣರಾದ ಸಾತ್ವಿಕರಿಂದ ಕೂಡಿದಂಥ ಎಂದರೆ ಧ್ಯಾನಿಸಲ್ಪಡುವಂಥ, ಅಧಿಕಗುಣಗಂಭೀರಂ-ಮಹತ್ತರವಾದ ಗುಣಗಳಿಂದ ಪರಿಪೂರ್ಣನಾದ, ಅನಿಮಿಷಾ..ರಂಗಂ-ದೇವತೆಗಳಲ್ಲಿ ಅಭಿಮಾನವುಳ್ಳಂಥ, ಸ್ವೈರಂ-ಸ್ವತಂತ್ರನಾದಂಥ.

ಭಿನ್ನಾರ್ಥಗಳುಳ್ಳ ವಿಶೇಷಣಗಳು :— ಶಿವಪರದಲ್ಲಿ —ಸದಾ..ಸ್ಥಿತಂ—ಸದಾ-ಸರ್ವಕಾಲದಲ್ಲಿಯೂ, ಹಿಮಕರ-ಚಂದ್ರನ ಅಂಕ-ಚಿಹ್ನೆಯುಳ್ಳ, ಲಾವಣ್ಯ-ಸಮುದಾಯಶೋಭೆಯ, ಪ್ರಭಾವ-ಆಧಿಕ್ಯದಿಂದ ಸ್ಥಿತಂ-ಕೂಡಿರುವಂಥ ; ಚಲ..ನ್ವಿತಂ—(ಶಿರಸ್ಸಿನಲ್ಲಿ) ಚಲಿಸುತ್ತಿರುವ, ಅಭ್ರಗಂಗಾ-ಆಕಾಶಗಂಗೆಯಿಂದ ಕೂಡಿರುವ ; ಅಭವ..ಶೋಭಿತಂ-ಅಭವನಾಗಿಯೂ, ನಿಸ್ತುಲಿತ-ಅಸದೃಶವಾದ, ಶುಭ್ರ-ಶುಭ್ರವಾದ, ಅನಂತಮಣಿ-ಅನೇಕವಾದ ಮಣಿಗಳಿಂದ ಶೋಭಿತನಾಗಿಯೂ ಇರುವ ; ಭೂತ..ಸ್ಪದಂ—ಭೂತಕುಲಜಾತ-ಪ್ರಮಥಗಣಗಳ ನಾಥರುಗಳ ವಾಸಕ್ಕೆ ಆಸ್ಪದಕೊಟ್ಟಿರುವ, ಶ್ರೀಶಂಕರಂ.

ವಿಷ್ಣುಪರವಾದಾಗ:—ಸದಾ..ಸ್ಥಿತಂ—ಸದಾ-ಯಾವಾಗಲೂ, ಅಹಿಮಕರನ-ಸೂರ್ಯನ ಎಂದರೆ ಸೂರ್ಯಮಂಡಲದ, ಅಂಕ-ಮಧ್ಯದಲ್ಲಿ, ಲಾವಣ್ಯಪ್ರಭಾ-ತೇಜೋವಿಶೇಷದಿಂದ, ಅವಸ್ಥಿತಂ-ಇರುವ ; ಚಲದ..ನ್ವಿತಂ-(ವಾಮನಾವತಾರದಲ್ಲಿ ಪಾದಾಂಗುಷ್ಠದಿಂದ,) ಚಲತ್-ಹೊರಟಿರುವ ಆಕಾಶಗಂಗೆಯಿಂದ ಅನ್ವಿತನಾದಂಥ ; ಅಭವ..ಶೋಭಿತಂ—ಅಭವ-ಉತ್ಪತ್ತಿರಹಿತನಾಗಿಯೂ, ನಿಸ್ತುಲಿತ-ಅಸದೃಶವಾದ, ಶುಭ್ರ-ಬೆಳ್ಳಗಿರುವ, ಅನಂತ-ಆದಿಶೇಷನ, ಮಣಿ-

ಶಿರೋರತ್ನಗಳಿಂದ ಭೂಷಿತನಾಗಿರುವಂಥ ; ಭೂತ....ವಾಸಾಸ್ಪದಂ–ಭೂತ ಕುಲ-ಪಂಚಭೂತಗಳು, ಜಾತ-ಅವುಗಳಿಂದ ಉತ್ಪನ್ನವಾದ ಪ್ರಾಣಿಗಳ ನಾಥ-ನಾಥರಾದ ದೇವಲೋಕಗಳಲ್ಲಿರುವವರಿಗೆ ಆಶ್ರಯಸ್ಥಾನವಾದ ; ಶ್ರೀಶಂ-ಶ್ರಿಯಃಪತಿಯು, ಶ್ರೆಯಮಂ ಎಮಗೆ ಮಾಳ್ಕೆ-ಮಾಡಲಿ.

೪ ಶ್ರೀರಾಮಪತ್ನಿಯಾದ ಸೀತೆಯನ್ನೂ, ಶಿವಪತ್ನಿಯಾದ ಪಾರ್ವತಿಯನ್ನೂ ಶ್ಲೇಷೆಯಿಂದ ವರ್ಣಿಸಿ ಇದೆ. ಚಂಚಲಾಯತನೇತ್ರೆ-ಚಂಚಲವಾಗಿಯೂ ದೀರ್ಘವಾಗಿಯೂ ಇರುವ ನೇತ್ರಗಳುಳ್ಳ ; ಕಪಿಸ್ತುತಿಪಾತ್ರೆ–ಕಪಿ-ಸುಗ್ರೀವ ಪ್ರಮುಖರ ಸ್ತುತಿಗೆ ಪಾತ್ರಳಾದ ; ಕಪಿಮುಖ-ಕಪಿಯ ಮುಖವುಳ್ಳ ನಂದೀಶ್ವರನ ಸ್ತುತಿಗೆ ಪಾತ್ರಳಾದ ; ಪಂಚಮಸುವಾಣಿ-ಪಂಚಮಸ್ವರದಂತಿರುವ ವಾಕ್ಕುಳ್ಳ ; ಫಣಿವೇಣಿ-ಸರ್ಪದಂತಿರುವ ಹೆರಳುಳ್ಳ ; ಕಲ್ಯಾಣಿ-ಮಂಗಳಕರಳಾದ ; ದೇವಾಂಚಿತ..ತೆ-ದೇವತೆಗಳಿಂದ ಪೂಜಿಸಲ್ಪಟ್ಟ ಪಾದಕಮಲಗಳುಳ್ಳ ; ವಿಖ್ಯಾತೆ-ಪ್ರಸಿದ್ಧಳಾದ ; ಲೋಕೈಕಮಾತೆಯಾದ ; ಚಂಚಲಾಲಕಿ-ಚಲಿಸುತ್ತಿರುವ ಮುಂಗುರುಳುಗಳುಳ್ಳ ; ರಾಜವದನೆ-ಚಂದ್ರಮುಖಿಯಾದ ; ಗುಣಗಣಸದನೆ-ಸುಗುಣಸಮೂಹಗಳಿಗೆ ಮನೆಯಾದಂಥ ; ಪಂಚಾಸ್ಯಮಧ್ಯೆ-ಸಿಂಹದ ನಡುವಿನಂತೆ ನಡುವುಳ್ಳ ; ಅಕ್ಷರವಿದ್ಯೆ-ಬ್ರಹ್ಮಸ್ವರೂಪಿಣಿಯಾದ ; ನಿರವದ್ಯೆ-ದೋಷರಹಿತಳಾದ ; ಮಾನನೀ-ಪೂಜ್ಯಳಾದ ; ಗೊತ್ರಾತ್ಮಜಾತೆ-ಗೋತ್ರಾ ಎಂದರೆ ಭೂಮಿ, ಅವಳ ಆತ್ಮಜಾತೆ-ಪುತ್ರಿಯಾದ ಸೀತೆಯೋ, ಗೋತ್ರ-ಪರ್ವತಕ್ಕೆ ಪುತ್ರಿಯಾದ ಪಾರ್ವತಿಯೋ, ಎನ್ನ ಕಬ್ಬಂ-ಕಾವ್ಯವು, ಧರೆಯೊಳು-ಭೂಮಿಯಲ್ಲಿ, ಎಂದುಂ-ಯಾವಾಗಲೂ, ಮಾನಿಪಂತೆ-ಗೌರವಿಸಲ್ಪಡುವ ಹಾಗೆ ಎನ್ನ ವಾಂಛಿತವ-ಇಷ್ಟಾರ್ಥವನ್ನು, ಈ-ಕೊಡು.

೫ ಈ ಪದ್ಯದಲ್ಲಿ (೧) ವಿನಾಯಕನನ್ನೂ, (೨) (ವೀನಾಂ ನಾಯಕಃ–ವಿನಾಯಕನಾದ) ಗರುಡನನ್ನೂ ಸ್ತುತಿಸಿದ್ದಾಳೆ. ಕೆಳಗಣ ಟೀಕೆಯಲ್ಲಿ ೧ ಎಂದರೆ ವಿನಾಯಕಪರವಾದಾಗ ಅರ್ಥ, ೨ ಎಂದರೆ ಗರುಡಪರವಾದಾಗ ಅರ್ಥವೆಂದು ತಿಳಿಯಬೇಕು.

ದ್ರಾವಕಂ- ೧ ಪಾಪನಾಶಕನಾದ, ೨ ವೇಗವುಳ್ಳ. ವಿನತಾತ್ಮಬಂಧ್ವಸಚ್ಚರಿತ ಸಿದ್ರಾವಕಂ–೧ ವಿನತ-ನಮಸ್ಕರಿಸಿದವರಿಗೆ ಆತ್ಮಬಂಧುವಾಗಿಯೂ ಮತ್ತು ಅವರಲ್ಲಿರುವ ಅಸಚ್ಚರಿತ್ರ-ಕೆಟ್ಟ ನಡತೆಗಳನ್ನು ನಿಶ್ಶೇಷವಾಗಿ ನಾಶಪಡಿಸತಕ್ಕವನಾಗಿಯೂ ಇರುವ, ೨ ವಿನತಾತ್ಮಬಂಧು-ವಿನತಾದೇವಿಗೆ ಮಗನಾದ ಮತ್ತು ಆಶ್ರಿತರಲ್ಲಿರುವ ಅಸಚ್ಚರಿತವನ್ನು ಹೋಗಲಾಡಿಸುವಂಥ ಅಥವಾ

ವಿನತೆಗೆ ಆತ್ಮಬಂಧುಗಳಾದ ಸರ್ಪಗಳ ಮೂಲಕ ಉಂಟಾದ ಅಸಚ್ಚರಿತ-ಬಂಧನರೂಪವಾದ ದುಷ್ಕಾರ್ಯವನ್ನು ತಪ್ಪಿಸಿದವಂಥ. ನಾಗಾವೃತಾಂಗಂ-೧ ಸರ್ಪದಿಂದ ಬಿಗಿಯಲ್ಪಟ್ಟ ಹೊಟ್ಟೆಯುಳ್ಳ ೨ ಸರ್ಪಗಳಿಂದ ಆವೃತವಾದ ಅಂಗಗಳುಳ್ಳ. ದಯಾಸಮುದ್ರಾವಕರಕಂ-೧, ೨ ದಯಾಸಮುದ್ರದ ಘನಸ್ವಭಾವವುಳ್ಳ. ದೀರ್ಘನಾಸಿಕಂ—೧ ಸೊಂಡಿಲುಳ್ಳ, ೨ ಉದ್ದವಾದ ಮೂಗುಳ್ಳ. ಅಮೋಘಂ-೧, ೨ ನಾಶರಹಿತನಾದಂಥ. ಸುವರ್ಣಪಕ್ಷಪ್ರಭಾವಂ—೧ ಸುವರ್ಣಪಕ್ಷ-ಗರುಡನಂತೆ ಪ್ರಭಾವವುಳ್ಳ (ಗರುಡನೂ, ವಿನಾಯಕನೂ ವೇದಪ್ರತಿಪಾದ್ಯರಾಗಿರುವುದರಿಂದ), ೨ ಸುವರ್ಣ-ಚಿನ್ನದ ಪಕ್ಷ-ಗರಿಗಳ ಪ್ರಭಾವವುಳ್ಳ. ಭಾವರಹಿತಂ-೧, ೨ ಕರ್ಮಸಂಬಂಧವಾದ ಜನ್ಮವಿಲ್ಲದಂಥ. ಬುಧಜನೌಘವಂದಿತಪದಂ-೧, ೨ ಜ್ಞಾನಿಗಳಿಂದ ವಂದಿತವಾದ ಪಾದಗಳುಳ್ಳ. ಅಭಾವಜನ್ಮಂ-೧ ಅಭಾವ ಎಂದರೆ ಅಭವ, ಈಶ್ವರ ಅವನಿಂದ ಜನ್ಮವುಳ್ಳ, ೨ ಭಾವ ಸಂಸಾರ ಸಂಬಂಧವಾದ ಜನ್ಮವಿಲ್ಲದಂಥ. ಇಂಥ ವಿನಾಯಕಂ-೧ ವಿನಾಯಕನು, ೨ ಗರುಡನು, ಭಾವಶುದ್ಧಿಯನಿತ್ತು-ಮನಸ್ಸಿಗೆ ನೈರ್ಮಲ್ಯವನ್ನು ಉಂಟು ಮಾಡಿ, ಕೃತಿಗೆ-ಕಾವ್ಯಕ್ಕೆ, ನಿರ್ವಿಘ್ನತೆಯನ್ನು ಎಸಗಿ ಎಮ್ಮನು ಅವಗಂ ಒಲಿದು ಪೊರೆಗೆ-ರಕ್ಷಿಸಲಿ.

೬ ಈ ಪದ್ಯದಲ್ಲಿ ಷಟ್ಪದೀರೂಪದಲ್ಲಿರುವ ತನ್ನ ಕಾವ್ಯವನ್ನೂ ಕಾವ್ಯಾಭಿಮಾನಿ ದೇವತೆಯಾದ ಸರಸ್ವತೀದೇವಿಯನ್ನೂ ಶ್ಲೇಷೆಯಿಂದ ವರ್ಣಿಸಿದ್ದಾಳೆ.

ಕಾವ್ಯಪರವಾಗಿ ಅರ್ಥ:—ಯತಿಗಣಾಶ್ರಯಮೆನಿಸಿ-ಛಂದಸ್ಸಿನ ಯತಿಗಳು, ಗಣಗಳು ಇವುಗಳಿಗೆ ಆಶ್ರಯವಾಗಿ ; ಶಬ್ದಾರ್ಥಭಾವದಿಂ-ಶಬ್ದಗಳು, ಅರ್ಥಗಳು, ಭಾವಗಳು, ಇವುಗಳಿಂದ ಕೂಡಿ ; ಅತಿರಸಾಲಂಕಾರವೊಪ್ಪೆ-ಅತಿಶಯವಾದ ಶೃಂಗಾರಾದಿ ರಸಗಳು ಉಪಮಾದ್ಯಲಂಕಾರಗಳು ಒಪ್ಪೆ ಎಂದರೆ ಕೂಡಿರಲು ; ಜೀವಾಕ್ಷರಸುಗತಿಗಿರ್ಕೆಯಾಗಿ-ಜೀವಸ್ಥಾನದಲ್ಲಿರುವ ಪ್ರಾಸಾಕ್ಷರಗಳಿಗೆ ಸ್ಥಾನವಾಗಿ ; ನವ....ಮನೋಜ್ಞಮೆನೆ—ನವ-ಅಪೂರ್ವವಾದ, ಪದಪುಂಜ-ಪದಗಳ ಸಮೂಹದಿಂದ ರಂಜಿತವಾಗಿಯೂ, ಆದುದರಿಂದಲೇ ಮನೋಹರವಾಗಿಯೂ ಇರುವ ; ಕೈವಲ್ಯದ ನುತ ಸುಕೃತಪದ್ಯಾವಳಿಯೆ ಇದೆನಿಸುತ್ತೆ—ಕೈವಲ್ಯದ-ಮೋಕ್ಷಪ್ರದವಾಗಿಯೂ,ನುತ-ಶ್ರೇಷ್ಠವಾದ ಸುಕೃತ-ಚೆನ್ನಾಗಿಜೋಡಿಸಲ್ಪಟ್ಟೂ ಇರುವ ಪದ್ಯಗಳ, ಆವಳಿಯೆ-ಸಾಲೇ, ಇದು-ಈ ಕಾವ್ಯವು ಎಂದು ಎನಿಸಿಕೊಳ್ಳುತ್ತ ; ವಸುಮತಿಗೆ-ಭೂಮಿಯಲ್ಲಿ, ವಿಬುಧರ್ಕಳಿಂ-ವಿದ್ವಾಂಸರುಗಳಿಂದ, ಸಂಭಾವ್ಯಮಾಗೆ-ಸ್ತೋತ್ರಮಾಡಲ್ಪಡುವ ಹಾಗೆ ಆಗಿ ; ಭಾರತಿ-ನನ್ನ ಕಾವ್ಯರೂಪವಾದ ವಾಕ್ಕೂ.

ಸರಸ್ವತಿಯ ಪರವಾಗಿ :—ಯತಿಗಣಾಶ್ರಯಮೆನಿಸಿ-ನಾರದಾದಿ ಯತಿಸಮೂಹಕ್ಕೆ ಆಶ್ರಯಳೆನಿಸಿ ; ಶಬ್ದಾರ್ಥಭಾವದಿಂ-ಶಬ್ದಾರ್ಥಗಳ ರೂಪದಿಂದ ಕೂಡಿ ; ಅತಿರಸಾಲಂಕಾರವೊಪ್ಪೆ—ಅತಿರಸ-ಬಹು ರಮಣೀಯವಾದ, ಅಲಂಕಾರ-ಕಟಕ ಮಕುಟಾದಿ ಅಲಂಕಾರಗಳು ಒಪ್ಪಿರಲು ; ಜೀವಾಕ್ಷರಸುಗತಿಗಿರ್ಕೆಯಾಗಿ-ಸರ್ವತೀ ಮಂತ್ರದಲ್ಲಿರುವ ಬೀಜಾಕ್ಷರಗಳ, ಸುಗತಿಗೆ-ಸಮನ್ವಯಕ್ಕೆ, ಇರ್ಕೆಯಾಗಿ-ಸ್ಥಾನವಾಗಿ ; ಕೈವಲ್ಯದ ನವಪದಪುಂಜರಂಜಿತಮನೋಜ್ಞಮೆನೆ—ಕೈವಲ್ಯಕ್ಕೆ ನವ-ಹೊಸದಾದ, ಪದಪುಂಜ-ಹಲವು ದಾರಿಗಳಿಂದ, ರಂಜಿತ-ಕೂಡಿ ಮನೋಹರಳು ಎಂಬಂತಿರುವ ; ವಸುಮತಿಗೆ-ಭೂಲೋಕದಲ್ಲಿರುವ ಜನಗಳಿಗೆ ನುತ..ವಳಿಯೆ ಎನಿಸುತ್ತೆ-ಶ್ರೇಷ್ಠವಾದ ಸುಕೃತ-ಪುಣ್ಯಗಳಿಗೆ, ಪದ್ಯಾವಳಿ-ಕಾಲುದಾರಿ, ಎನಿಸುತ್ತೆ-ಎನ್ನಿಸಿಕೊಂಡು ; ವಿಬುಧರ್ಕಳಿಂ-ವಿದ್ವಾಂಸರುಗಳಿಂದ, ಸಂಭಾವ್ಯಮಾಗೆ-ಗೌರವಿಸಲ್ಪಡುವ ಹಾಗೆ ಇರುವ, ಭಾರತಿ-ಸರಸ್ವತೀ ದೇವಿಯೂ.

ಒಲಿದು-ಪ್ರೀತಿಯಿಂದ, ಎನಗೆ ಇಷ್ಟಾರ್ಥಮಿತ್ತು-ಕೋರಿದ ಅಭಿಲಾಷೆಯನ್ನು ಕೊಟ್ಟು, ಮಜ್ಜಿಹ್ವಾಗ್ರದಿ ನನ್ನ ನಾಲಗೆಯ ತುದಿಯಲ್ಲಿ, ಅಜಸ್ರಂ-ನಿರಂತರವೂ ಇರ್ಕೆ.

೭ ಈ ಪದ್ಯದಲ್ಲಿ ವಿಷ್ಣುಸ್ವರೂಪಿಯಾದ ಶ್ರೀರಾಮನನ್ನೂ ಚತುರ್ಮುಖಬ್ರಹ್ಮನನ್ನೂ ಶ್ಲೇಷೆಯಿಂದ ಸ್ತುತಿಸುತ್ತಾಳೆ.

ವಿಷ್ಣುಪರದಲ್ಲಿ :—ನಮುಚಿಸೂದನನಂಗೆ-ಇಂದ್ರನಿಗೆ, ಸಖನಾಗಿ-ಸಹಜಸಖನಾಗಿ ಎಂದರೆ ಉಪೇಂದ್ರನಾಗಿ (ವಾಮನನಾಗಿ ಹುಟ್ಟಿ ;) ಪ್ರೇಮದಿಂ ನಮುಚಿಸೂದನಮುಖ್ಯದಿವಿಜರ್ಕಳಂ-ಬಲಿಚಕ್ರವರ್ತಿ ಪ್ರಮುಖರಾದ ರಾಕ್ಷಸರಿಂದ ಪರಾಜಿತರಾದ ಇಂದ್ರನೇ ಮೊದಲಾದ ದೇವತೆಗಳನ್ನು, ಉಚಿತದೆ-ಉಚಿತವರಿತು (ಎಂದರೆ ತ್ರಿವಿಕ್ರಮಾವತಾರವನ್ನು ಎತ್ತಿ), ಪೊರೆದನಂ-ಕಾಪಾಡಿದಂಥ ; ಸುಗುಣನಿಧಿಯಾದ ಲೋಕೇಶನೆನಿಪ-ಲೋಕಕ್ಕೆಲ್ಲಾ ತಾನೇ ಸ್ವಾಮಿಯೆಂದು ಹೇಳಿಸಿಕೊಂಡ, ವಿಧಿಯಂ-ಸರ್ವವಿಧಾಯಕನಾದ ಪರಬ್ರಹ್ಮನನ್ನು, ಸದಾ ಧ್ಯಾನಿಸಿ ; ಕಮಲದೆ-ಜಲದಲ್ಲಿ, ಎಲೆಯೊಳ್-ಆಲದೆಲೆಯ ಮೇಲೆ, (ವಟಪತ್ರ ಶಾಯಿಯಾಗಿ) ಮಲಗಿ ; ಪಕ್ಕಿಯನಡರ್ದು-ಗರುಡನನ್ನು ಏರಿ (ಗರುಡವಾಹನನಾಗಿ), ನಿಜಕಮಲೆಯೊಡನೆ-ತನ್ನ ಲಕ್ಷ್ಮಿಯೊಡನೆ, ಅನುದಿನಂ-ನಿತ್ಯದಲ್ಲೂ ಮೆರೆದಿರ್ಪ, ಭಕ್ತಹೃತ್ಕಮಲಾಸನನಂಗೆ-ಭಕ್ತರ ಹೃತ್ಕಮಲವೆಂಬ ಆಸನದಲ್ಲಿ ಮಂಡಿಸಿರುವ, ಭವವಾರಿ....ಬ್ರಹ್ಮಂಗೆ—ಸಂಸಾರವೆಂಬ ಸಮುದ್ರವನ್ನು

ತಾರಕ-ದಾಟಿಸುವ ಬ್ರಹ್ಮಂಗೆ-ಪರಮಾತ್ಮಸ್ವರೂಪಿಯಾದ ಶ್ರೀರಾಮನಿಗೆ, ಎಂದುಂ-ಸರ್ವದಾ, ಮಣಿವೆನು-ನಮಸ್ಕರಿಸುವೆನು.

ಚತುರ್ಮುಖಬ್ರಹ್ಮನ ಪರದಲ್ಲಿ:—ಇಂದ್ರನಿಗೆ ಸಖನಾಗಿ, ಪ್ರೇಮದಿಂ ನಮುಚಿ..ಪೊರೆದನಂ-ಇಂದ್ರನೇ ಮೊದಲಾದ ದೇವತೆಗಳನ್ನು ಕಾಪಾಡಿದಂಥ ಎಂದರೆ ಅವರ ಕಷ್ಟಗಳನ್ನು ತನ್ನವೆಂದು ಭಾವಿಸಿ ಕ್ಷೀರಾಬ್ಧಿಗೆ ಹೋಗಿ ವಿಷ್ಣುವಿನಲ್ಲಿ ಅರಿಕೆಮಾಡಿ ಅವರನ್ನು ಅವನಿಂದ ಕಾಪಾಡಿದಂಥ ; ಲೋಕೇಶನೆನಿಸಿದ, ಸುಗುಣನಿಧಿಯಾದ, ವಿಧಿಯಂ-ಬ್ರಹ್ಮನನ್ನು ಸದಾ, ಉಚಿತದೆ-ತಕ್ಕ ರೀತಿಯಲ್ಲಿ ಧ್ಯಾನಿಸಿ, ಬಳಿಕ ಕಮಲದೆಲೆಯೊಳ್ ಮಲಗಿ-ಕಮಲಾಸನನಾಗಿ ಕುಳಿತು, ಪಕ್ಕಿಯನಡರ್ದು-ಹಂಸವಾಹನನಾಗಿ, ನಿಜಕಮಲೆಯೊಡನೆ-ತನ್ನ ಪತ್ನಿಯಾದ ಸರಸ್ವತಿಯೊಡನೆ, ಅನುದಿನಂ-ನಿತ್ಯವೂ, ಮೆಱೆದಿರ್ಪ, ಕಮಲಾಸನಂಗೆ-ಕಮಲಾಸನನಾದ ಬ್ರಹ್ಮನಿಗೆ, ಮಣಿವೆಂ. ಬ್ರಹ್ಮಪರದಲ್ಲಿ ಅರ್ಥಮಾಡುವಾಗ ಭಕ್ತಹೃತ್, ಭವವಾರಿನಿಧಿತಾರಕ ಎಂಬ ವಿಶೇಷಣಭಾಗಗಳನ್ನು ಬಿಟ್ಟುಬಿಡಬೇಕು.

೮ ಈ ಪದ್ಯದಲ್ಲಿ ಹನುಮಂತನನ್ನೂ ಷಣ್ಮುಖನನ್ನೂ ಶ್ಲೇಷೆಯಿಂದ ವರ್ಣಿಸಿದೆ.

ಹನುಮಂತನು :—ಮಾರಹರನ-ಶಿವನ, ಅಂಶವೆನಲ್-ಅಂಶವಾಗಿ, (ಹನುಮಂತನು ರುದ್ರಾಂಶವೆಂದು ಪುರಾಣದಲ್ಲಿ ಹೇಳಿದೆ, ಅದ್ದರಿಂದಲೇ) ಅಂಬಿಕಾತ್ಮಜನಾಗಿ-ಪಾರ್ವತಿಗೆ ಪುತ್ರನಾಗಿ, ಅಥವಾ ತಾಯಿಯಾದ ಅಂಜನಾದೇವಿಗೆ ಪ್ರಿಯಮಗನಾಗಿ, ವಾರಿಧಿಯನ್ನು ದಾಟಿ, ಲಂಕೆಯಂ ಪೊಕ್ಕು, ಪರನಾರಿಯಂ-ಸೀತೆಯನ್ನು ಬಯಸಿದ ಅಸುರನ-ರಾವಣನ ಗರ್ವವಂ ಮುರಿದು, ಕಾಲಾದಿ ಖಳರ-ಕಾಲನೇಮಿ ಮೊದಲಾದ ಅನೇಕ ರಾಕ್ಷಸರನ್ನು ಮಡುಹಿ-ಕೊಂದು, ವೀರಸೇನಾಸಮೂಹವಿರುವ, ಪೊಱಲ-ಲಂಕಾಪತ್ತನವನ್ನು ಉರಿಪಿ-ಸುಟ್ಟು, ತಾನು ಸಾರುತ-ಬಂದು, ಈಶಂಗೆ-ಸ್ವಾಮಿಯಾದ ರಾಮನಿಗೆ, ಎಱಗಿದ, ಅರಿಭಯಂಕರತಾರಕಾರಿ-ಅರಿಗಳಿಗೆ ಭಯವನ್ನುಂಟುಮಾಡುವುದರಲ್ಲಿ ತಾರಕಾರಿ-ಷಣ್ಮುಖನ ಹಾಗಿರುವ ಹನುಮಂತನು ಅನುದಿನಂ ಕೂರ್ಮೆವೆತ್ತು-ಪ್ರಿತಿಯಿಂದ ಶ್ರೀಶ್ರೈವಸಂಪದವಂ-ಶ್ರೇಷ್ಠವಾದ ಮಂಗಳಕರವಾದ ಸಂಪತ್ತನ್ನು ಎಮಗೆ ಮಾಳ್ಕೆ-ಮಾಡಲಿ. ಹನುಮಂತನು ಸಂಜೀವಿನೀ ಮೂಲಿಕೆಯನ್ನು ತರಲು ಹೋಗಿದ್ದಾಗ ಕಾಲನೇಮಿಯೆಂಬ ರಾಕ್ಷಸನು ರಾವಣನಿಂದ ಚೋದಿತನಾಗಿ ವಿಘ್ನಮಾಡಿ ಹನುಮಂತನಿಂದ ಸಂಹರಿಸಲ್ಪಟ್ಟನು ಎಂದು ಪುರಾಣ ಕಥೆ ಇದೆ.

ಷಣ್ಮುಖನು :—ಮಾರಹರನಂಶವೆನಲ್, ಅಂಬಿಕಾತ್ಮಜನಾಗಿ, ವಾರಿಧಿಯನುತ್ತರಿಸಿ-ಸಮುದ್ರದ ನೀರನ್ನು ಚಿಮ್ಮಿಸಿ, ಲಂಕೆಯಂ-ಅಸುರರಿಗೆ ವಾಸಸ್ಥಾ

ನವಾದ ಪಾತಾಳಲಂಕೆಯಂ ಪೊಕ್ಕು, ಪರನಾರಿಯಂ (ಪರಾ ಚ ಸಾ ನಾರೀ ಚ ಎಂದರೆ) ಪಾರ್ವತಿಯನ್ನು ಬಯಸಿದ ಅಸುರನ-ತಾರಕನೆಂಬ ಅಸುರನ ಗರ್ವಮಂ ಮುಱಿದು, ಕಾಲಾದಿಖಳರ-ಅವನ ಪರಿವಾರವಾದ ಕಾಲನೇಮಿ ಮೊದಲಾದ ದುಷ್ಟರನ್ನು ಮಡುಹಿ-ಕೊಂದು, ವೀರಸೇನಾನಿಕರಮೆಸೆವ ಪೊೞಲ-ರಾಜಧಾನಿಯನ್ನು, ಉರಿಪಿ-ಸುಟ್ಟು ಇಲ್ಲವೆ ಹಾಳುಮಾಡಿ, ತಾಂ-ತಾನು ಸಾರುತ-ಹೋಗಿ, ಈಶಂಗೆ-ಶಿವನಿಗೆ ಎಱಗಿದ ಅರಿಭಯಂಕರ ತಾರಕಾರಿ-ಅರಿಗಳಿಗೆ ಭಯಜನಕನಾದ ತಾರಕನಿಗೆ ಶತ್ರುವಾದ ಷಣ್ಮುಖನು ಶ್ರೀಶೈವಸಂಪದವಂ-ಶ್ರೇಷ್ಠವಾದ ಶಿವಸಂಬಂಧವಾದ ಸಂಪತ್ತನ್ನು ಎಂದರೆ ಶಿವಲೋಕ ಪ್ರಾಪ್ತಿಗೆ ಬೇಕಾದ ಐಶ್ವರ್ಯವನ್ನು ಕೂರ್ಮೆವೆತ್ತು ಅನುದಿನಂ ಎಮಗೆ ಮಾಳ್ಕೆ.

೯ ಈ ಪದ್ಯದಲ್ಲಿ ಕವಿಯು ಯಾರನ್ನು ವರ್ಣಿಸಿದ್ದಾನೆಯೋ ಎಂಬುದನ್ನು ನಿರ್ಧರಿಸುವುದು ಕಷ್ಟವಾಗಿದೆ. ಏಕೆಂದರೆ :—

ಪೂರೈಸುತಿಹ ಸಮಾಶುಗನೆ ಎಂಬುದಕ್ಕೆ ಪೂರೈಸುತಿಹ + ಅಸಮಾಶುಗನೆ ಎಂದು ಪದವಿಭಾಗ ಮಾಡಿ, ಅಸಮಾಶುಗ ಎಂಬುದಕ್ಕೆ ಅಸಮವಾದ ಬಾಣಗಳುಳ್ಳ ಮನ್ಮಥನು ಎಂದರ್ಥಮಾಡಿ ಪದ್ಯಾರ್ಥವನ್ನು ಹೇಳೋಣವೆಂದರೆ, ಆಗ–(ವಸಂತ ಮನ್ಮಥರಿಬ್ಬರೂ ಕಾಮೋದ್ದೀಪಕರಾದುದರಿಂದ ವಸಂತನನ್ನು ಮನ್ಮಥನಿಗೆ ಸ್ನೇಹಿತನೆಂದು ವರ್ಣಿಸುವುದುಂಟಾಗಲಾಗಿ) ಮಾಧವಗೆ-ವಸಂತಋತುವಿಗೆ ಮಿತ್ರನಾದೆ ಎಂಬುದೂ, (ಮನ್ಮಥನು ಅನಂಗನಾದುದರಿಂದ) ಮೆಯ್ದೋಱದೆ ಈ ಜಗದೊಳೆಲ್ಲೆಲ್ಲಿಯುಂ ಚರಿಸಿ ಎಂಬುದೂ, ಭೂಭೃದ್ವರರ-ಜಿತೇಂದ್ರಿಯರಾದ ರಾಜಶ್ರೇಷ್ಠರ ಪಗೆಗೊಂಡು ಸಂಹರಿಸಿ-ಸತ್ತೆಯನ್ನು ಹೋಗಲಾಡಿಸಿ ತನ್ನ ವಶಮಾಡಿಕೊಂಡು ಜಸವಡೆದೆ ಎಂಬುದೂ, ಬಳಿಕ ಸೊಗಸಿನಿಂ ಪ್ರಮದಾಳಿಗೆ-ಸ್ತ್ರೀಯರುಗಳಿಗೆ ಅನುಚರನೆನಿಸಿ ಸ್ತ್ರೀಯರ ಮೂಲಕವಾಗಿಯೇ ಪುರುಷರನ್ನು ವಶಮಾಡಿಕೊಳ್ಳುವುದರಿಂದ ಸ್ತ್ರೀಯರಿಗೆ ಆಳಾಗಿ, ಜನರ ಬಗೆಬಗೆಯ ಕಾಮಿತವ–ಇಷ್ಟಪಟ್ಟ ಕಾಮಗಳನ್ನು ಪೂರೈಸುತಿಹ ಎಂಬುದೂ, ನೀಂ ಸದಾಗತಿ-ಯಾವಾಗಲೂ ಗಮನವುಳ್ಳವನು ಎಂಬುದೂ, ಸಮಂಜಸವಾಗಿ ಅರ್ಥಕೊಡುತ್ತವಾದರೂ ಶೇಷರಾಜರಿಗೆ ಅಹಿತನು ಎಂಬುದಕ್ಕೆ ಮಾತ್ರ ಅರ್ಥವಾಗುವುದಿಲ್ಲ ಮತ್ತು ಈ ಕಾವ್ಯದಲ್ಲಿ ಶೃಂಗಾರರಸವು ಅಷ್ಟು ಪ್ರಬಲವಾಗಿ ಕಂಗೊಳಿಸದ ಪ್ರಯುಕ್ತ ಮನ್ಮಥವಿಷಯವಾಗಿ ಮಂಗಳನ್ನು ಮಾಡುವುದರಲ್ಲಿ ಯಾವ ಔಚಿತ್ಯವೂ ಕಂಡುಬರುದಿವುಲ್ಲ.

ಅಸಮಾಶುಗನೆ–ಅಸಮ (ಸಮಸ್ತದೇವತಾಂತರ್ಗತಪ್ರಾಣನಾದುದರಿಂದ) ಅಸದೃಶನಾದ ಆಶುಗನೇ-ವಾಯುವೇ ಎಂದರ್ಥಮಾಡಿ ಪದ್ಯಾರ್ಥವನ್ನು ಹೇಳೋಣವೆಂದರೆ, ಆಗ–ಮಾಧವಗೆ-ವಿಷ್ಣುವಿಗೆ (ವಾಯುದೇವನು ಹನುಮಂತನಾಗಿಯೂ ಭೀಮಸೇನನಾಗಿಯೂ ಮಧ್ವಾಚಾರ್ಯರಾಗಿಯೂ ಜನಿಸಿ ವಿಷ್ಣುವಿಗೆ ಸಹಾಯಮಾಡಿದುದರಿಂದ ಮಿತ್ರನಾದೆ, ಅಥವಾ ಮಾಧವಗೆ-ವಸಂತಋತುವಿಗೆ ಮಿತ್ರನಾದೆ-ಸಹಾಯನಾದೆ, ಕಾಮೋದ್ದೀಪಕನಾಗಲಾಗಿ) ಎಂಬುದೂ, ಮೈದೋಱದೆ..ಚರಿಸಿ ಎಂಬುದೂ, ಪ್ರಮದಾಳಿಗನುಚರನೆನಿಸಿ–ಪ್ರಮದ-ಮದಿಸಿರುವ, ಅಳಿಗೆ-ಭ್ರಮರಗಳಿಗೆ ಅನುಚರನಾಗಿ ಎಂಬುದೂ, ಜನರ ಬಗೆಬಗೆಯ ಕಾಮಿತವ ಪೂರೈಸುತಿಹ-(ವಾಯುದೇವನನ್ನೂ, ತದವತಾರರಾದ ಹನುಮಂತ ಭೀಮಸೇನ ಮಧ್ವಾಚಾರ್ಯರು ಇವರನ್ನು ಭಜಿಸಿದ) ಜನರ ಮೋಕ್ಷಹೊಂದಬೇಕೆಂಬ ಇಷ್ಟಾರ್ಥವನ್ನುಂಟುಮಾಡುವ ಎಂಬುದೂ, ನೀಂ ಸದಾಗತಿ-ಸರ್ವತ್ರ ಸಂಚರಿಸುವವನು ಅಥವಾ ಸತ್ಪುರುಷರಲ್ಲಿ ಬರುವವನು ಎಂಬುದೂ ಸರಿಹೋಗುತ್ತವೆ ; ಭೂಭೃದ್ವರರ ಪಗೆಗೊಂಡು ಸಂಹರಿಸಿ ಎಂಬುದಕ್ಕೂ ಶೇಷರಾಜರಿಗೆ ಅಹಿತನಾಗಿ ಎಂಬುದಕ್ಕೂ ಸಮಂಜಸವಾಗಿ ಅರ್ಥ ಮಾಡುವುದಕ್ಕೆ ಆಗುವುದಿಲ್ಲ. ಹೇಗಾದರೂ ಅರ್ಥಯೋಜನೆ ಮಾಡಬೇಕು ಎಂಬಲ್ಲಿ ಬ್ರಹ್ಮಾಂಡ ಪುರಾಣಾಂತರ್ಗತವಾದ ವೇಂಕಟಾಚಲಮಾಹಾತ್ಮ್ಯದಲ್ಲಿ ಹೇಳಿರುವ ವಾಯುವಿಗೂ ಶೇಷನಿಗೂ ಪರಸ್ಪರ ಬಲಪರೀಕ್ಷೆಯಾದ ಇತಿಹಾಸವನ್ನು ತೆಗೆದುಕೊಳ್ಳಬೇಕು. ಆಗ ಭೂಭೃದ್ವರರು-ಮೇರು ಮತ್ತು ಮೇರುಪುತ್ರನಾದ ವೇಂಕಟಾಚಲ ಎಂಬ ಪರ್ವತಗಳು ಎಂದೂ, ಶೇಷರಾಜನಿಗೆ-ಅನಂತನಿಗೆ, ಅಹಿತನು-ಶತ್ರುವು ಎಂದೂ ಅರ್ಥವಾಗುತ್ತದೆ. ಕವಿಯು ಮಾಧ್ವಳಲ್ಲ, ಸ್ಮಾರ್ತಳು ; ಉಡುಪಿಯು ಮಾಧ್ವರಿಗೆ ಮುಖ್ಯಕ್ಷೇತ್ರವಾಗಿಯೂ, ಅವರಿಗೆ ವಾಯುವು ಉಪಾಸ್ಯದೇವತೆಯಾಗಿಯೂ ಇರುವುದರಿಂದ ವಾಯುದೇವನ ಮಂಗಳವನ್ನು ಇಲ್ಲಿ ಮಾಡಿದ್ದಾಳೆ ಎಂದು ಹೇಳೋಣವೆಂದರೆ ವಾಯುಸ್ತುತಿಯನ್ನು ಈ ನಾಂದೀಸಂಧಿಯಲ್ಲಿ ಸೇರಿಸುವುದಕ್ಕೆ ಯಾವ ಸಾಮಂಜಸ್ಯವನ್ನೂ ಹೇಳುವುದಕ್ಕಾಗುವುದಿಲ್ಲ.

---

## ಪೀಠಿಕಾಸಂಧಿ.

ಈ ಪದ್ಯದ ಪೂರ್ವಾರ್ಧ ಉತ್ತರಾರ್ಧಗಳು ಒಂದೇ ಆಗಿರುವುದರಿಂದ, ಅರ್ಧಸಮ ಯಮಕವೆಂಬ ಶಬ್ದಾಲಂಕಾರಕ್ಕೆ ಇದು ಉದಾಹರಣೆಯಾಗಿದೆ. ಪೂರ್ವಾರ್ಧಕ್ಕೆ ದೇವತಾಪರವಾಗಿಯೂ, ಉತ್ತರಾರ್ಧಕ್ಕೆ ನವಗ್ರಹ ಪರವಾಗಿಯೂ ಅರ್ಥವಾಗುತ್ತದೆ. ಹೇಗೆಂದರೆ :—

೧. ಹರಿಗೆಱಗಿ-ವಿಷ್ಣುವಿಗೆ ನಮಸ್ಕರಿಸಿ, ಸೋಮನಂ-ಉಮೆಯೊಡನೆ ಕೂಡಿರುವ ಶಿವನನ್ನು, ಮನಂದಣಿಯೆ-ತೃಪ್ತಿಯಾಗುವ ಹಾಗೆ, ನುತಿಸುತೆ, ಹರಿವಾಹನನ-ಹಂಸಪಕ್ಷಿಯನ್ನು ವಾಹನವಾಗುಳ್ಳ ಬ್ರಹ್ಮನ ಬಲಂಗೊಂಡು-ಸಹಾಯ ಹೊಂದಿ, ಹರಿಪುತ್ರರಂ-ಸೂರ್ಯಪುತ್ರನಾದ ಎಂದರೆ ಇಂದ್ರಪುತ್ರನಾದ ಸುಗ್ರೀವ ಮೊದಲಾದವರನ್ನು, ಅಥವಾ ಸೂರ್ಯವಂಶದಲ್ಲಿ ಜನಿಸಿದ ರಾಮಲಕ್ಷ್ಮಣರನ್ನು ಮತ್ತು ಹರಿಸುತಾದ್ಯರ್ಗೆ-ಕೇಸರಿಯೆಂಬ ವಾನರ ಪುತ್ರನಾದ ಹನುಮಂತನೇ ಮೊದಲಾದವರಿಗೆ ತಲೆವಾಗಿ-ನಮಸ್ಕರಿಸಿ, ಗುರುಕವಿಬುಧರ-ಗುರುಗಳು, ಕವಿಗಳು, ವಿದ್ವಾಂಸರು ಇವರುಗಳ, ಪದಕಮಲಮಂ-ಕಮಲದಂತೆ ಸ್ಪೃಹಣೀಯವಾಗಿರುವ ಪಾದಗಳನ್ನು ಧ್ಯಾನಿಸಿ ; ಹರಿಗೆಱಗಿ-ಸೂರ್ಯನಿಗೆ ನಮಸ್ಕರಿಸಿ, ಸೋಮನಂ-ಚಂದ್ರನನ್ನು ನುತಿಸುತೆ, ಹರಿವಾಹನನ-ಕುದುರೆಯನ್ನು ವಾಹನವಾಗುಳ್ಳ ಮಂಗಳನನ್ನು ಬಲಂಗೊಂಡು, ಹರಿಪುತ್ರರಂ-ಸರ್ಪಪುತ್ರರಾದ ಎಂದರೆ ಸರ್ಪಾಕಾರವುಳ್ಳ ತಮೋಗ್ರಹದ ಮೇಲುಭಾಗ ಕೆಳಭಾಗಗಳಾದ ರಾಹು ಕೇತು ಗ್ರಹಗಳನ್ನು ತಲೆವಾಗಿ, ಹರಿಸುತಾದ್ಯರ್ಗೆ-ಸೂರ್ಯಪುತ್ರನಾದ ಶನಿಯೇ ಮೊದಲಾದ ಇತರ ಗ್ರಹಗಳಿಗೆ ತಲೆವಾಗಿ, ಗುರು-ಬೃಹಸ್ಪತಿ ಕವಿ-ಶುಕ್ರ ಬುಧರ-ಬುಧರೆಂಬ ಗ್ರಹಗಳ, ಪದಕಮಲಮಂ ಧ್ಯಾನಿಪೆಂ.

೨. ಧರೆಯುತ್ತಣಿಂ-ಭೂಮಿಯಲ್ಲಿ ; ಇಲ್ಲಿ ಕವಿಯು ಪ್ರಾಸಿಗೋಸ್ಕರ ಸಪ್ತಮ್ಯರ್ಥದಲ್ಲಿ ಪಂಚಮಿಯನ್ನುಪಯೋಗಿಸಿರಬಹುದೆಂದಿಟ್ಟುಕೊಂಡರೆ ಆಗ ಭೂಮಿಯಲ್ಲಿ ಪೆತ್ತಯ್ಯಂ ಉತ್ತಮನು, ಅಯ್ಯನಿಂದ....ಎಂದನ್ವಯಮಾಡಬೇಕು. ಅಥವಾ ಧರೆಯುತ್ತಣಿಂ-ಭೂಮಿಗಿಂತಲೂ ಪೆತ್ತಯ್ಯಂ ಉತ್ತಮನು; ಅಯ್ಯನಿಂದ-ತಂದೆಗಿಂತ ಅನುದಿನಂ ಉಪ್ಪನ್ನವಿತ್ತು-ಉಪ್ಪು ಅನ್ನಾ ಕೊಟ್ಟು, ಪೊರೆದವನೆ-ಸಾಕಿದವನು ಉತ್ತಮಂ ; ಅಯ್ಯನಿಂದ-ಅಯ್ಯನಿಗಿಂತಲೂ, ಆತನಿಂದ-ಸಾಕಿದವನಿಗಿಂತಲೂ ಆಪತ್ತಿಗೆ ಒದವಿದ, ಭಟಂ-ಕಾಪಾಡಲು ಬಂದ ಶೂರನು ಉತ್ತಮನು; ಪಿತಂ ಅನ್ನದಾತಂ ಆಪದ್ಬಾಂಧವಾದ್ಯರ್ ಇವರೆಲ್ಲರಿಗಿಂತಲೂ ಗುರುವು ಉತ್ತಮೋತ್ತಮನು ಎಂಬರ್. ಎನಗೆ ಓರೊರ್ವರ್ ಒಂದೊಂದಂ ಉಪದೇಶಿ

ಸುತ್ತ ಬಗೆಬಗೆಯ-ನಾನಾವಿಧವಾದ, ಭಾವನೆಯಿತ್ತರ್-ಅಭಿಪ್ರಾಯಗಳನ್ನು ಪದೇಶಿಸಿದಂಥ, ಅನಿಬರೆಲ್ಲರ್-ಅಷ್ಟು ಜನಗಳೂ ಗುರುಗಳೆಂದು ಎಱಗುವೆಂ. ಅಯ್ಯನಿಂದ-ಪಂಚಮ್ಯರ್ಥದಲ್ಲಿ ತೃತೀಯೆ ಬಂದಿದೆ. ಪಿತಂ, ಅನ್ನದಾತಂ, ಆಪದ್ಬಾಂಧವಾದ್ಯರಿಂದ—ಷಷ್ಟ್ಯದಿಯಲ್ಲಿ ಪ್ರಥಮಾವಿಭಕ್ತಿಯನ್ನು ಇತರ ವಿಭಕ್ತಿ ಗಳಿಗೆ ಬದಲಾಗಿ ಸಾಮಾನ್ಯವಾಗಿ ಉಪಯೋಗಿಸುವ ವಾಡಿಕೆಯುಂಟು. ಎಂಬುದಕ್ಕೆ ಇದು ಪ್ರಯೋಗ.

೩ ವ್ಯಾಸ-ಮಹಾಭಾರತ ಕರ್ತನು. ವಾಲ್ಮೀಕಿ-ರಾಮಾಯಣ ಕರ್ತನು. ಜೈಮಿನಿ ಆಶ್ವಮೇಧಿಕ ಕಥೆಯನ್ನು ಸಂಸ್ಕೃತದಲ್ಲಿ ಪುರಾಣರೂಪದಲ್ಲಿ ಬರೆದ ಋಷಿಯು. ಪಿಂಗಳಾಖ್ಯ-ಪಿಂಗಳನೆಂದು ಹೆಸರುಳ್ಳ ಛಂದಶ್ಶಾಸ್ತ್ರಕರ್ತನು. ಭವಭೂತಿ-ಉತ್ತರ ರಾಮಚರಿತನಾಟಕ, ಮಹಾವೀರಚರಿತವೆಂಬ ನಾಟಕಗಳ ಕರ್ತನು. ಶೂದ್ರಕ-ಮೃಚ್ಛಕಟಿಕೆಯೆಂಬ ನಾಟಕಕರ್ತನು. ಕಾಳಿದಾಸ-ಶಾಕುಂತಳ, ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ ವೆಂಬ ನಾಟಕಗಳಿಗೂ, ರಘು ವಂಶ, ಮೇಘಸಂದೇಶ, ಕುಮಾರಸಂಭವ ವೆಂಬ ಕಾವ್ಯಗಳಿಗೂ ಕರ್ತನಾದ ಕವಿಶ್ರೇಷ್ಠನು. ಬಾಣ-ಕಾದಂಬರಿಯ ಕರ್ತನು. ಚಂದ್ರಭಟ್ಟ ಸು 1079 ಲ್ಲಿದ್ದ ಪ್ರಸಿದ್ಧನಾದ ಬ್ರಾಹ್ಮಣಕವಿ, ಮದನತಿಲಕವೆಂಬ ಗ್ರಂಥದ ಕರ್ತನು. ಕೇಶವ, ವಾಸುದೇವ, ದಿಗಂಬರವಿಲಾಸ, ವೇಂಕಟ—ಇವರ ವಿಷಯವಾಗಿ ಕವಿಚರಿ ತ್ರಕಾರರು ಕೂಡ ಏನೂ ಹೇಳಿಲ್ಲ. ಅಚ್ಯುತ—ತುಲಸೀಮಾಹಾತ್ಮ್ಯವನ್ನು ಬರೆದ ಸು. 1650 ರಲ್ಲಿದ್ದ ಅಚ್ಯುತದಾಸನಾಗಿರಬಹುದು. ಕೃಷ್ಣನು—ಸು.1700 ರಲ್ಲಿದ್ದ ಕೃಷ್ಣಕರ್ಣಾಮೃತವನ್ನು ಬರೆದ ಕವಿಯಾಗಿರಬಹುದು. ನಂದಿ-ಸು 1605 ರಲ್ಲಿದ್ದ ನಂದೀಶಕವಿಯೋ, 19 ನೆಯ ಶತಮಾನದಲ್ಲಿದ್ದ ನಂದಿಛಂದ ಸ್ಸನ್ನು ಬರೆದವನೋ ಗೊತ್ತಾಗುವುದಿಲ್ಲ. ಕವಿರುದ್ರ—ಸು. 1180 ರಲ್ಲಿದ್ದ ಜಗನ್ನಾಥವಿಜಯವೆಂಬ ಚಂಪೂಗ್ರಂಥವನ್ನು ಬರೆದ ರುದ್ರಭಟ್ಟನಾಗಿರ ಬಹುದು. ಷಡಕ್ಷರಿ—17 ನೆಯ ಶತಮಾನದಲ್ಲಿದ್ದ, ರಾಜಶೇಖರವಿಲಾಸ, ವೃಷ ಭೇಂದ್ರವಿಜಯ, ಶಬರಶಂಕರವಿಲಾಸವೆಂಬ ಪ್ರಸಿದ್ಧವಾದ ಚಂಪುಗಳನ್ನು ಬರೆದ ಷಡಕ್ಷರಿದೇವನು. ಅವರ ಅಭಿಮತನನುಸರಿಸಿ-ಅವರಿಗೆ ಸಮ್ಮತವಾದ ಪದ ವಾಕ್ಯಪ್ರಯೋಗಗಳನ್ನು ಪ್ರಮಾಣವಾಗಿಟ್ಟುಕೊಂಡು.

೪ ಈ ಪದ್ಯವು "ಮಂದಃ ಕವಿಯಶಃಪ್ರಾರ್ಥೀ ಗಮಿಷ್ಯಾಮ್ಯುಪಹಾಸ್ಯತಾಂ। ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ ॥" ಎಂಬ ರಘು ವಂಶಶ್ಲೋಕದ ಪರಿವರ್ತನವಾಗಿದೆ. .

೫ ಅಂಬಿಗನ ಪಟವಾತು–ವ್ಯಾಸಮಹರ್ಷಿಯಿಂದ ಕೃತವಾದ ಮಹಾಭಾರತ; ಅಂಬಿಗನ ಮಗಳಾದ ಮತ್ಸ್ಯಗಂಧಿಯಲ್ಲಿ ಪರಾಶರಮಹರ್ಷಿಯಿಂದ ಜನಿಸಿದವನಾದುದರಿಂದ ವ್ಯಾಸನು ಅಂಬಿಗನಾದನು ; ಆತನ ಪಟವಾತು-ವೇದ ಎಂದರೆ ಪಂಚಮವೇದವೆಂದು ಹೆಸರುವಡೆದ ಮಹಾಭಾರತ. ಬಿಯದಂ ಬರೆದ ಕಬ್ಬ-ವಾಲ್ಮೀಕಿ ಕೃತವಾದ ರಾಮಾಯಣ ; ವಾಲ್ಮೀಕಿಯು ವ್ಯಾಧನಾಗಿದ್ದು ಆಮೇಲೆ ಋಷಿಯಾದನೆಂದು ಹೇಳುತ್ತಾರೆ ; ಬಿಯದ-ತ್ಸ. ವ್ಯಾಧ. ಕುಱುಂಬನ ಬಯಲ್ನುಡಿ-ಕಾಳಿದಾಸನಿಂದ ಕೃತವಾದ ಮೇಘದೂತವೆಂಬ ಮಹಾಕಾವ್ಯ. ಕಾಳಿದಾಸನು ಮೊದಲು ಕುರುಬನ ಮಗನಾಗಿದ್ದನೆಂದು ಜನರು ವಾಡಿಕೆಯಾಗಿ ಹೇಳುತ್ತಾರೆ. ಬಯಲ್ನುಡಿ-ಆಕಾಶವಾರ್ತೆ, ಮೇಘದೂತದಲ್ಲಿ ಮೇಘವನ್ನು ಕುರಿತು ಹೇಳಿದ ಮಾತುಗಳೇ ಇರುವುದರಿಂದ ಅದು ಬಯಲನ್ನು ಕುರಿತು ಹೇಳಿದ ಮಾತಾದಕಾರಣ ಮೇಘದೂತವನ್ನು ಬಯಲ್ನುಡಿ ಎಂದು ಕರೆದಿದೆ. ಓದಿದೊಡೆ-ಪಠಿಸಿದೊಡೆ ಸುಪಾಂಡಿತ್ಯಂ ಬರ್ಕುಮೆ ಎಂದನ್ವಯ. ಹಂಬಲು-ಚಿಂತೆ. ಸದ್ಬೋಧಕಂ-ಉಪಾಧ್ಯಾಯನು, ಹೇಳಿಕೊಟ್ಟವನು.

೬ ಮಾಣ್ಬನೆ-ಬಿಡುವನೆ. ಗುಮ್ಮ-ಕಾಡುಕೋಳಿ. ದೋಷಕಂ-ದೋಷಕ್ಕೆ, ಪಾಪಕ್ಕೆ.

೭ ಕನ್ನಡ ಜಾಣೆ-ಕನ್ನಡವೆಂಬ ಜಾಣೆಯು ; ಕನ್ನಡಭಾಷೆಯಲ್ಲಿ ರಚಿಸಿದ ಈ ಕಾವ್ಯವನ್ನು ಒಬ್ಬ ಗುಣವಂತಳಾದ ಸ್ತ್ರೀಯಂತೆ ಈ ಪದ್ಯದಲ್ಲಿ ಉತ್ಪ್ರೇಕ್ಷಿಸಿದೆ. ಮೃದುಪದಾನ್ವಿತೆ-ಇಲ್ಲಿ ಪದ ಎಂಬುದಕ್ಕೆ ಪಾದಗಳು, ಪದ್ಯಗಳು ಎಂದು ಎರಡು ಅರ್ಥ. ಮಂದಗತಿ-ಇಲ್ಲಿ ಗತಿ ಶಬ್ದಕ್ಕೆ ಗಮನ, ಪದಗಳ ಜೋಡಣೆ ಎಂದೂ, ಸಂಧಿಶೋಭಿತೆ-ಇಲ್ಲಿ ಸಂಧಿ ಎಂಬುದಕ್ಕೆ ಅಂಗಗಳಸಂಧಿ, ಪದಗಳ ಸಂಧಿ ಎಂದೂ; ವರ್ಣಯುಕ್ತೆ-ಇಲ್ಲಿ ವರ್ಣಶಬ್ದಕ್ಕೆ, ಬಣ್ಣ, ಅಕ್ಷರ ಎಂದೂ; ಷಟ್ಪದ ವೇಣಿ-ಇಲ್ಲಿ ಷಟ್ಪದ ಎಂಬುದಕ್ಕೆ ಭ್ರಮರ, ಷಟ್ಪದ ವೃತ್ತಗಳು ಎಂದೂ ; ನವರಸಭರಿತೆ-ಇಲ್ಲಿ ನವರಸವೆಂಬುದಕ್ಕೆ ಹೊಸಬಗೆಯ ರಸ, ಶೃಂಗಾರಾದಿ ಒಂಭತ್ತು ರಸಗಳು ಎಂದೂ ಎರಡೆರಡರ್ಥಗಳಿವೆ. ಸಚ್ಚರಿತೆ-ಒಳ್ಳೆಯ ನಡತೆಯುಳ್ಳವಳು, ಮಹಾಪುರುಷನ ಚರಿತವನ್ನೊಳಕೊಂಡುದು. ಸುನಯನಾತಿಕಠಿನಸ್ವಭಾವೆ-ಶೋಭನವಾದ ನಯನಗಳುಳ್ಳವಳು ಮತ್ತು ಅತಿಕಠಿನವಾದ (ತೀವ್ರವಾದ) ಹಟದಿಂದ ಕೂಡಿದ ಸ್ವಭಾವವುಳ್ಳವಳು ; ಸುನಯನ-ಸುಲಭವಾಗಿ ಅನ್ವಯಿಸಲ್ಪಡುವುದಾಗಿಯೂ ಮತ್ತು (ಶ್ಲೇಷಾದಿಗಳಿಂದ) ಅತಿಕಠಿನವಾದ ಶಬ್ದಗಳ ಸ್ವಭಾವಗಳುಳ್ಳುದು. ಸತ್ಕಳಾಕೋವಿದರ-ಶಾಸ್ತ್ರಪಂಡಿತರ ; ಇಲ್ಲಿ ಸತ್ಕಳಾಶಬ್ದಕ್ಕೆ ಕಳಾಶಾಸ್ತ್ರ, ಅಥವಾ ಶ್ರೇಷ್ಠವಾದ ಶಾಸ್ತ್ರ ಎಂದರ್ಥಮಾಡಬಹುದು. ರಸವಿಹೀನರಿಂಗೆ-ಅರಸಿಕರಿಗೆ. ಗಾಂಪ-ಗ್ರಾಮೀಣ, ಹೆಡ್ಡ.

೮ ಚೆನ್ನನೊರ್ವಂ ಮರುಳನಾದೊಡೇಂ ಚೆನ್ನನಾಗನೆ; ವಿತ್ತಸಂಪನ್ನೆ ಬಂಜೆ ಎನಿಸಿದೊರ್ಡೇಂ ವಿತ್ತಸಂಪನ್ನೆಯಾಗಳೆ? ಅವುಗಳಂತೆ ಎನ್ನ ಕಬ್ಬಂ ಕನ್ನಡ ದೊಳ್ ಬರೆಯ ವಟ್ಟೊಡೇಂ ಕಬ್ಬಮಾಗದೆ, ಎಂದು ಅಧ್ಯಾಹಾರಮಾಡಿಕೊಂಡು ಅನ್ವಯಿಸಬೇಕು. ಕನ್ನಡದ ಭಾಷೆಯಲ್ಲಿ ಬರೆದಮಾತ್ರಕ್ಕೆ ಈ ಕಾವ್ಯವು ನಿಂದ್ಯ ವಾಗಲಾರದು ಎಂದು ತಾತ್ಪರ್ಯ.

೯ ಈ ಪದ್ಯದಲ್ಲಿ ಶ್ಲೇಷಮೂಲಕವಾಗಿ ೧ ಕಾವ್ಯಬರೆಯುವ ಕವಿಯನ್ನು ೨ ಹಣದ ಲೇವಾದೇವಿ ಮಾಡುವ ವರ್ತಕನಿಗೆ ಹೋಲಿಸಿ ಹೇಳಿದೆ.

ಮೂಲ—೧ ಕಾವ್ಯಕ್ಕೆ ಆಧಾರವಾದ ಕಥೆ; ೨ ಬಂಡವಾಳ. ವೃದ್ಧಿ—೧ ಕಥೆ ಯನ್ನು ವಿಸ್ತರಿಸಲು ಸೇರಿಸಿದ ಭಾಗ; ೨ ಬಡ್ಡಿ. ಬಹುಪದಾರ್ಥಕ್ಕೆ—೧ ಅನೇಕ ಸಂದರ್ಭಗಳಿಗೆ; ೨ ವ್ಯಾಪಾರಕ್ಕೆ ಬೇಕಾದ ಸರಕುಗಳಿಗೆ. ಋಣಶೇಷಗಳ— ೧ ಇತರ ಗ್ರಂಥಗಳಿಂದ ತೆಗೆದ ಪದಗಳನ್ನು ಅಭಿಪ್ರಾಯಗಳನ್ನು ಸಂಗತಿಗ ಳನ್ನು; ೨ ಹಳೆಯ ಬಾಕಿಗಳನ್ನು. ಭೇದಿಸುತ—೧ ಇತರ ಗ್ರಂಥಗಳಿಂದ ತೆಗೆ ದುವಲ್ಲ, ತನ್ನವೇ ಎಂದು ತೋರುವಂತೆ ಮಾಡಿ; ೨ ತೀರಿಸಿ. ಕಾಲಕರ್ಮಗಳ ಅನುಸರಿಸಿ—೧. ಕಾಲಕ್ರಮವನ್ನು ಅನುಸರಿಸಿ ಸಂಗತಿಗಳನ್ನು ಜೋಡಿಸಿ ಹೇಳಿ; ೨ ಯಾವ ಕಾಲದಲ್ಲಿ ಯಾವ ಲೆಕ್ಕಾಚಾರ ವಸೂಲಾತಿಗಳನ್ನು ಮಾಡ ಬೇಕೋ ಅವುಗಳನ್ನು ಆಗಲೇ ಮಾಡಿ. ನಿತ್ಯಕರ್ತೃಕ್ರಿಯೆ ವಿಭಕ್ತಿಗಳೊಳು ಮೇಲೆನಿಸಿ—ನಿತ್ಯದಲ್ಲಿಯೂ ೧ ಕರ್ತೃಪದಗಳು, ಕ್ರಿಯಾಪದಗಳು ವಿಭಕ್ತಿಗಳು ಇವುಗಳ ಪ್ರಯೋಗದಲ್ಲಿ ಯಾವ ವಿಧವಾದ ದೋಷವು ಬಾರದಂತೆ ಚೆನ್ನಾಗಿ ಕವಿತ್ವವನ್ನುಮಾಡಿ; ೨. ಕರ್ತೃವು ಎಂದರೆ ಯಜಮಾನನು ಮಾಡಬೇಕಾದ ಜಮಾಖರ್ಚುಗಳಲ್ಲಿ ಯೋಗ್ಯನೆನಿಸಿಕೊಂಡು. ಸತ್ಕೃತಿಯೆಸಗೆ—೧ ಶ್ರೇಷ್ಠ ವಾದ ಕಾವ್ಯವನ್ನು ಬರೆಯಲು; ೨ ಒಳ್ಳೆಯ ಕೆಲಸವನ್ನು ನಡೆಸಲು. ಮಾನ್ಯ ನಹನು ಎಂದಧ್ಯಾಹಾರ. ಮೃದುವಚನಚಯದಿಂದ ಎಸೆಯೆ—೧ ಮೃದುವಾದ ಪದಗಳ ಸಮೂಹದಿಂದ ಎಂದರೆ ದ್ರಾಕ್ಷಾಪಾಕದಿಂದ ಪ್ರಕಾಶಿಸುತ್ತಿರಲು; ೨ (ಬಂದವರೊಡನೆ) ಒಳ್ಳೊಳ್ಳೆಯ ಮಾತುಗಳನ್ನು ಹೇಳುತ್ತ. ಮೇಲೆ- ಇಷ್ಟು ಆದಮೇಲೆ. ಏಕವಚನಕ್ರಮವ ಪಿಡಿದಿರಲ್—೧ ಏಕರೀತಿಯಾದ ಮಾತು ಗಳ ಜೋಡಣೆಯ ಕ್ರಮವನ್ನು ಅನುಸರಿಸಿ ಎಂದರೆ ಒಂದೇ ವಿಧವಾದ ರೀತಿ ಶಯ್ಯೆಗಳನ್ನು ಆಶ್ರಯಿಸಿ; ೨ ಒಂದೇ ರೀತಿಯಾಗಿ ಮಾತನಾಡುವಿಕೆಯನ್ನು ಪಿಡಿದಿರಲು ಎಂದರೆ ಒಂದು ವೇಳೆ ಒಂದು ತೆರದಲ್ಲಿ ಇನ್ನೊಂದು ವೇಳೆ ಇನ್ನೊಂದು ತೆರದಲ್ಲಿ ಮಾತಾಡದೆ ಸತ್ಯವಾಕುಳ್ಳವನಾಗಿರಲು. ಅವನ—೧ ಕಾ ವ್ಯಕರ್ತನ; ೨ ವ್ಯಾಪಾರಿಯ.

೧೦ ಬಕ, ಕಪಿ, ಆಡು, ಇಲಿಗಳ ಸ್ವಭಾವಲಕ್ಷಣಗಳಲ್ಲಿ ಒಂದೊಂದು ಸ್ವಭಾವ; ಇರುವೆ, ನಾಯಿ, ಹಂಸ, ಹುಲಿಗಳ ಗುಣಗಳೊಳಗೆ ಒಂದೊಂದು ಗುಣ; ಕೋಗಿಲೆ, ಚಿತ್ರಗಾರ, ಹುಚ್ಚ, ವಿದೂಷಕ, ವರ್ತಕರುಗಳ ಲಕ್ಷಣಗಳಲ್ಲಿ ಒಂದೆರಡು ಲಕ್ಷಣಗಳು, ಈ ಗುಣಲಕ್ಷಣಸಂಪನ್ನನಾಗಿರುವ ಕವಿಯು ಲೋಕಮಿರ್ಪನ್ನವರೆಗಂ-ಯಾವಾಗಲೂ, ಅಕಳಂಕಕೀರ್ತಿಯಿಂದೊಪ್ಪಿರ್ಪಂ.

೧೧ ಕಥಾಸುಧೆಯ-ಕಥಾಮೃತವನ್ನು ಈಂಟುಗೆ-ಪಾನಮಾಡಲಿ. ಅಧಿನಾಥರ್-ವಿದ್ವಾಂಸಶ್ರೇಷ್ಠರು ಅಥವಾ ರಾಜರುಗಳು. ಝುರಿ-ಪ್ರವಾಹ. ನವ..ರಸಿಕರ್ ಕಾವ್ಯರಸಜ್ಞರಾದ ರಸಿಕರು. ಶೋಧಿಸುತಿರ್ಕೆ—ನೀರನ್ನು ಉಳ್ಳವರಲ್ಲವೆ ಅದರಲ್ಲಿರುವ ಕಲ್ಮಷಗಳನ್ನು ತೆಗೆಯಬಲ್ಲವರು? ಆದುದರಿಂದ ರಸಝುರಿಯ ರಸಿಕರನ್ನು ಕುರಿತು ದೋಷವನ್ನು ಶೋಧಿಸಿಕೊಡುವಂತೆ ಪ್ರಾರ್ಥಿಸುವುದರಲ್ಲಿ ಔಚಿತ್ಯವುಂಟು. ಬುಧರನ್ನು ಕುರಿತು ತಿದ್ದುಗೆ ಕೈಕೊಳ್ಗೆ ಎಂದೂ, ಭಕ್ತರನ್ನು ಕುರಿತು ಈಂಟುಗೆ ಎಂದೂ, ಅಭಿಮಾನಿಗಳನ್ನು ಕುರಿತು ಮನ್ನಿಸುತಿರ್ಕೆ ಎಂದೂ, ಅಧಿನಾಥರನ್ನು ಕುರಿತು ಆಶ್ರಯಮಿತ್ತೆಸಗೆ ಎಂದೂ ಬೇಡಿಕೊಳ್ಳುವುದರಲ್ಲಿ ಔಚಿತ್ಯವನ್ನು ವಿಚಾರಿಸಿ. ವಿಧುಪುರದ ಲಕ್ಷ್ಮೀಮನೋಹರಂ-ಉಡುಪಪುರದ (ಉಡುಪಿಯ) ಲಕ್ಷ್ಮೀಪತಿಯಾದ ಕೃಷ್ಣನು. ಕವಿಯು ಉಡುಪಿಯವಳಾದುದರಿಂದ ಆ ಊರಿನ ದೇವರನ್ನು ಸ್ಮರಿಸುತ್ತಾಳೆ. ಲಕ್ಷ್ಮೀಶಕವಿಯು ಜೈಮಿನಿಯಲ್ಲಿಯೂ, ನಾರಣಪ್ಪನು ಕನ್ನಡ ಭಾರತದಲ್ಲಿಯೂ ತಂತಮ್ಮ ಊರಿನ ದೇವರ ಹೆಸರನ್ನು ತಮತಮಗೆ ಅಂಕಿತವಾಗಿ ತಮ್ಮತಮ್ಮ ಗ್ರಂಥಗಳ ಪ್ರತಿಸಂಧಿಯ ಕೊನೆಯ ಪದ್ಯದಲ್ಲಿ ಸೇರಿಸಿರುವಂತೆ ಈ ಗ್ರಂಥಕರ್ತೃಳಾದ ಮಹಾಲಕ್ಷ್ಮಿಯು ಪ್ರತಿ ಸಂಧಿಯ ಅಂತ್ಯಪದ್ಯದಲ್ಲಿ ತನ್ನ ಊರಿನ ದೇವರ ಹೆಸರನ್ನು ಸೇರಿಸಿರುತ್ತಾಳೆ. ಉಡುಪ=ಚಂದ್ರ, ವಿಧು.

ಈ ಸಂಧಿಯಲ್ಲಿ ಕವಿಯು ತನ್ನ ವಿಚಾರವಾಗಿಯೂ ತನ್ನ ಕವಿತ್ವದ ವಿಚಾರವಾಗಿಯೂ ಸಂಗ್ರಹಿಸಿ ಹೇಳಿಕೊಂಡಿರುವುದರಿಂದ, ಈ ಸಂಧಿಗೆ ಪೀಠಿಕಾ ಸಂಧಿಯೆಂದು ಹೆಸರಿಟ್ಟಿದ್ದಾಳೆ.

## ಮೂಱನೆಯ ಸಂಧಿ.

ಸೂಚನೆ :—ಅಷ್ಟಾಹಿಕುಲಪೋಷನು-ನಾಗಗಳ ಎಂಟು ಕುಲಕ್ಕೂ ಪೋಷಕನಾದ.

* * * ಇಲ್ಲಿ ಐದು ಪದ್ಯಗಳು ಪಾತವಾಗಿ ಹೋಗಿವೆ.

೬ ನ್ಯಸ್ತಮಾನಸನಾಗಿ-ಮಡಗಲ್ಪಟ್ಟ ಮನಸ್ಸುಳ್ಳವನಾಗಿ, ಅತ್ಯಾಸಕ್ತನಾಗಿ. ಸ್ತೋಮ-ಸಮೂಹ. ದೈನ್ಯ-ಇಲ್ಲಿ ನಮ್ರತೆ. ಮಸ್ತಕವನಿಟುಹಿ-ಶಿರಬಾಗಿ.

೭ ತಲ್ಪ-ಹಾಸಿಗೆ. ಪ್ರಗ್ರಹ-ಹಗ್ಗ. ಎನಗೆ ಚಿತ್ತಶುದ್ಧಿಯ ಗ್ಡೈದು ಎಂದನ್ವಯಿಸ ಬೇಕು. ಪೊರೆ-ಕಾಪಾಡು ; ಪೊಱೆ ಎಂದಿದ್ದರೆ ಅರ್ಥವೇನಾಗುವುದು ? ಉತ್ತಮಾಂಗ-ಶಿರಸ್ಸು.

೮ ಸುಜ್ಞಾನಗಿರಿ ಶಿಖರಂ ಉಪಲಬ್ಧಮಕ್ಕುಂ—ಒಳ್ಳೆಯ ಜ್ಞಾನದ ಶಿಖರವು-ತುದಿಯು ಸಂಪಾದಿಸಿದ್ದಾಗಿ (ನೋಡಿದ್ದಾಗಿ) ಆಗುವುದು ; ತಾಪಸೌಘಕೆ ಉಪಜೀವನಂ-ಋಷಿಗಳಿಗೆಲ್ಲಾ ಬದುಕು—ಎಂದರೆ ತಾತ್ಪರ್ಯವೇನು. ರಾಮಚರಿತವು ಶಂಕೆ-ಸಂದೇಹವು ಎಂಬ ಉಪರಾಗಮಂ-ಗ್ರಹಣವನ್ನು (ಅಂಧಕಾರವನ್ನು) ಕಳೆದು-ಹೋಗಲಾಡಿಸಿ, ಚಿತ್ಭಾನು ಕಿರಣಮಂ-ಆತ್ಮನೆಂಬ ಸೂರ್ಯನ ಕಿರಣವನ್ನು ಪ್ರಸರಿಸುವುದು ಎಂದನ್ವಯ : ಇದಕ್ಕೆ ತಾತ್ಪರ್ಯವೇನು ?

೯ ಕರ್ಬುಗೋಲ್-ಕಬ್ಬಿನ ಜಲ್ಲೆ. ಪಿಂಡ-ಮುದ್ದೆ. ಗುಡ-ಬೆಲ್ಲ.

೧೦ ಎನಗೆ ಉತ್ಸವ ಹೊರತು ಆಲಸ್ಯವಿಲ್ಲ. ಒಂದೇ ಚಂಚಲಂ-ಅನುಮಾನವೊಂದೇ. ಅನಿತು-ಅಷ್ಟು. ಸೈಮಿನಿ-ತ್ಸ. ಸಂಯಮಿನಿ, ನರಕ, ಯಮಲೋಕ. ದೇವಪಾಲ-ಇಂದ್ರ.

೧೧ ಶರಣಂಗೆ-ಭಕ್ತನಾದ ವಿಭೀಷಣನಿಗೆ. ವಿಭಾವಸು-ಸೂರ್ಯ. ಸೋಗೆಗಣ್ಣ-ತುದಿಗೆ ಕಪ್ಪುಹಚ್ಚಿಕೊಂಡಿರುವ ಕಣ್ಣುಳ್ಳ ; ಸೋಗೆ—"ಕಣ್ಬುದಿಗೆರೆ" ಮತ್ತೊಂದರ್ಥ ನವಿಲುಗರಿ. ಎಣೆ-ಜೋಡಿ, ಸದೃಶ. ಉಲಿದರ್-ಸಂತೋಷದಿಂದ ಕೂಗಿದರು.

೧೨ ಶಶಧರಾನನೆ-ಸೀತೆ ; ಅವಯವಾರ್ಥವೇನು ? ಕುಲಿಶಶರೀರ-ಹನುಮಂತ ; ಅವಯವಾರ್ಥವೇನು ? ಪುರ-ಇಲ್ಲಿ ಅಯೋಧ್ಯೆ. ವಾನರೇಶ-ಸುಗ್ರೀವ. ತ್ರಿದಶರ-ಮೂರು ಅವಸ್ಥೆಗಳುಳ್ಳ ದೇವತೆಗಳ ; ಆ ಅವಸ್ಥೆಗಳು ಯಾವುವು ? ಮಣಿರಥದ ಮೌಕ್ತಿಕಂ-(ಮುತ್ತುಗಳು) ಅಶನಿಯೊಳ್-ವಜ್ರಾಯುಧದಲ್ಲಿ (ಇಲ್ಲಿ ವಜ್ರಗಳ ಮೇಲೆಯೂ), ಅಶನಿಗೋಪದೊಳ್-ಕೆಂಬುಳಗಳಲ್ಲಿಯೂ (ಇಲ್ಲಿ ಕೆಂಪುಗಳ ಮೇಲೆಯೂ) ಮಸಗೆ-ತಾಗಲು, ಮಕುಟಂಗಳ-ಕಿರೀಟಗಳನ್ನು ಪ್ರಕಾಶಿಸಿದುವು.

೧೩ ಸೂರ್ಯನ ರಥಕ್ಕೆ ಒಂದೇ ಗಾಲಿ ಎಂದು ವೇದದಲ್ಲಿ ವರ್ಣಿತವಾಗಿದೆ. ಇದರಲ್ಲಿ ಎರಡು ಗಾಲಿಗಳಿರುವುದರಿಂದ ಇದು ಸೂರ್ಯರಥವಲ್ಲ; ಅಗ್ನಿಯ ರಥದಲ್ಲಿ ನೀಲಧ್ವಜವಿದೆ ಎಂದು ಹೇಳಿರುವುದರಿಂದ ಇದು ಅಗ್ನಿರಥವಲ್ಲ. ಅತಿಭಾನುವಿಂ-ಹೆಚ್ಚಾದ ಪ್ರಕಾಶದಿಂದ. ಎತ್ತಣದೊ-ಎಲ್ಲಿಂದ ಬಂದಿತೊ? ಮಾನಕೆ-ಅಳತೆಗೆ, ಪೋಲಿಸಲು ಅಸದಳಮೆನಲ್-ಅಸಾಧ್ಯವೆನ್ನುವ ಹಾಗೆ. ತೆಂಗಡಲ್-ತೆಂಕಣ+ಕಡಲ್, ದಕ್ಷಿಣಸಮುದ್ರ.

೧೪ ಈ ಪದ್ಯದಿಂದ, ೩೪ ನೆಯ ಪದ್ಯದ ವರೆಗೆ ಸಮುದ್ರವು ವರ್ಣಿಸಲ್ಪಟ್ಟಿದೆ. ಕವಿಯು ಇಲ್ಲಿ ಉರುಳುತ್ತಬರುವ ಅಲೆಗಳನ್ನು ವರ್ಣಿಸುತ್ತಾಳೆ. ಜಡಭರಿತನಾಗಿ-ಜಲಭರಿತನಾಗಿ, ಜಡತ್ವದಿಂದ ಕೂಡಿದವನಾಗಿ ಎಂದೆರಡರ್ಥ. "ಲಡಯೋರಭೇದಃ" ಎಂಬ ನ್ಯಾಯದಿಂದ ಜಡ ಎಂದರೆ ಜಲ. ತಪ್ಪನೆಸಗಿದೆ....–ಶ್ರೀರಾಮನು ಶರಣಾಗತಿಯನ್ನು ಮಾಡಿದಾಗ ನಾನು ಗರ್ವದಿಂದ ಮೊಗತೋರಿಸದೆ ಇದ್ದೆನು, ನನ್ನನ್ನು ಶಿಕ್ಷಿಸುವೆನೆಂದು ಬಾಣಪ್ರಯೋಗಮಾಡಲು ಹೆದರಿ ಕಾಣಿಸಿಕೊಂಡೆನು; ಅಂತಹ ನನ್ನ ತಪ್ಪನ್ನು ಕ್ಷಮಿಸಿದ ಕರುಣಾಳು. ಎಸಗಿದೆ-ಮಾಡಿದೆನು. ಮುಂತಪ್ಪ-ಮುಂದೆ ಆಗುವ. ದಪ್ಪದೆರೆಗೈಗಳಿಂ-ದಪ್ಪವಾದ ತೆರೆಗಳೆಂಬ ಕೈಗಳಿಂದ. ಕೂರ್ಮೆ-ಪ್ರೀತಿ, ಹರ್ಷ.
• ಇರದೆ-(ಅವ್ಯಯ) ನಿಲ್ಲದೆ, ಸಾವಕಾಶಮಾಡದೆ.

೧೫ ಇಲ್ಲಿ ಅಲೆಗಳ ಎಡೆಎಡೆಗಳಲ್ಲಿ ಸಣ್ಣಸಣ್ಣ ಮೀನುಗಳು ಎದ್ದು ಬರುವುದನ್ನು ಉತ್ಪ್ರೇಕ್ಷಿಸಿ ಇದೆ. ಅನಿಮಿಷರ್-ರೆಪ್ಪೆಗಳಿಲ್ಲದವರು, ದೇವತೆಗಳು; ಮೀನುಗಳು. ಪಗೆಗೆ-ಶತ್ರುತ್ವಕ್ಕೆ. ಅಗ್ರಜರ್-ರಾಕ್ಷಸರು, ದೊಡ್ಡಮೀನುಗಳು. ಒರೆಯೆ-ಹೇಳುವುದಕ್ಕೋಸ್ಕರ.

೧೬ ಈ ಪದ್ಯದಲ್ಲಿ ಅಲೆಗಳ ಭರಿತ, ಇಳಿತಗಳು ವರ್ಣಿಸಲ್ಪಟ್ಟಿವೆ.

ಧರ್ಮವಂ ಮಿಕ್ಕು-ಮೀರಿ, ಸೀತೆಯಂ ಉಯ್ದು, ದೇವತೆಗಳಲ್ಲಿ ಸೊಕ್ಕಿ ಗರ್ವದಿಂದ ನಡೆದುಕೊಂಡ ದಶಕಂಧರಂ-ಹತ್ತು ತಲೆಯ ರಾವಣನು ಅಳಿದನು, ಆತನ ಪೊಟಲೊಳ್-ಪಟ್ಟಣದಲ್ಲಿ, ಒಕ್ಕಲ್-ಜನಗಳು ಇರಬಹುದೆ, ದುರ್ಯಶಮಪ್ಪುದೆನಗೆ-ಅಪಕೀರ್ತಿ ನನಗುಂಟಾಗುತ್ತದೆ, ಆದ್ದರಿಂದ ಅದನ್ನು ಹಾಳುಮಾಡಿಬಿಡುತ್ತೇನೆಂದು ಉಕ್ಕಿ ಮೊರೆದು ಮೇಲಕ್ಕೆ ಬರುವ ಸಮುದ್ರವು ತನಗೆ ಈ ಕೆಲಸ ತಕ್ಕುದಲ್ಲ-ಉಚಿತವಲ್ಲ, ರಾಘವನಾಜ್ಞೆ ಪಿರಿದು, ಮಱೆವೊಕ್ಕವಂಗೆ-ವಿಭೀಷಣನಿಗೆ ಈ ಊರನ್ನು ಕೊಟ್ಟನು ಎಂದು ಅರಿದು, ಹೆದರಿ

ಹಿಂದಕ್ಕೆ ಹೋಗುತ್ತದೆಯೋ ಎನ್ನುವ ಹಾಗೆ ಅಲೆಗಳು ತಡಿವೊಡೆದು-ದಡ ವನ್ನು ಹೊಡೆದು ಹಿಂದಿರುಗಿದುವು.

೧೭ ದೇವತೆಗಳೂ ರಾಕ್ಷಸರೂ ಸೇರಿ ಮಂದರ ಪರ್ವತವನ್ನು ಕಡೆಗೋಲುಮಾಡಿ ವಾಸುಕಿಯನ್ನು ಹಗ್ಗ ಮಾಡಿ ಕ್ಷೀರಸಮುದ್ರವನ್ನು ಕಡೆದಾಗ ಲಕ್ಷ್ಮೀದೇವಿ, ಐರಾವತ, ಉಚ್ಚೈಶ್ರವಸ್ಸು, ಕಾಮಧೇನು, ಚಿಂತಾರತ್ನ, ಪೀತಾಂಬರ, ಚಂದ್ರ, ವಿಷ, ಅಮೃತ ಮುಂತಾದುವುಗಳು ಹುಟ್ಟಿದುವು ಎಂದು ಪೂರ್ವಕಥೆ. ಈ ಪದ್ಯದಲ್ಲಿ ಸಮುದ್ರದ ಮೊರೆತವನ್ನು ವರ್ಣಿಸಿದೆ. ಸೌಭಾಗ್ಯ-ಐಶ್ವರ್ಯ, ಇಲ್ಲಿ ಅಮೃತ. ಭಂಗಕ್ಕೆ-ಅಲೆಗೆ, ಮಥನದಿಂದುಂಟಾದ ಕಷ್ಟಗಳಿಗೆ; ಸಮುದ್ರರಾಜನು ಮಥನಕ್ಕೆ ಪೂರ್ವದಲ್ಲಿ ತನ್ನಲ್ಲಿ ಸೌಭಾಗ್ಯ (-ಅಮೃತ) ವಿದ್ದಾಗ ಎಲ್ಲರೂ ನನ್ನನ್ನು ಆಶ್ರಯಿಸಲು ಹತ್ತಿರ ಬಂದರು, ಅದು ದೇವತೆಗಳ ಪಾಲಾಗಲು ತನಗೆ ಬಡತನ ಬಂದು, ಇಷ್ಟೊಂದು ಕಷ್ಟಕ್ಕೆ ಪಕ್ಕಾದೆ (ಈಡಾದೆ.) ನನ್ನ ದುಸ್ಥಿತಿಯನ್ನು ಕಂಡು ಪೆಱಮಗಂ-ಮಗನಾದ ಚಂದ್ರನು ಬಾನೇರ್ದಂ-ನನ್ನನ್ನು ಬಿಟ್ಟು ಆಕಾಶಕ್ಕೆ ಹೋದನು, ಅಣುಗಿ-ಮಗಳಾದ ಲಕ್ಷ್ಮಿಯು ಗಂಡನನ್ನು ಬಿಟ್ಟು ಧರೆಯತ್ತ ಸೇರ್ದಳ್–ಸಂಪಲ್ಲಕ್ಷ್ಮಿಯಾಗಿ ಅನೇಕ ಜನಗಳನ್ನು ಸೇರಿದಳು. ಅರಸಿಯರುಂ-ಪತ್ನಿಯರಾದ ನದಿಗಳು.

ಈ ಪದ್ಯದಲ್ಲಿ ಲೋಕಾನುಭವವನ್ನು ಈ ರೀತಿಯಾಗಿ ವರ್ಣಿಸಿರುವುದು ಚಮತ್ಕಾರವಾಗಿದೆ.

೧೮ ಕರುಣಾಸಮುದ್ರಕ್ಕೂ ಸಾಧಾರಣಸಮುದ್ರಕ್ಕೂ ಅಭೇದ ಕಲ್ಪನೆಯಿಂದ ವರ್ಣನೆಮಾಡಿದೆ. ಕಾಕುತ್ಸ್ಥ-ಕಕುತ್ಸ್ಥ ವಂಶದಲ್ಲಿ ಹುಟ್ಟಿದ ರಾಮ. ಕಾ..ಬ್ಧಿ-ಕಾಕುತ್ಸ್ಥನ ಕರುಣವೆಂಬ ಸಮುದ್ರವು. ಸಾಕಾರಮಾಗಿ-ರೂಪ ವನ್ನು ಹೊಂದಿ, ಪ್ರತ್ಯಕ್ಷವಾಗಿ. ಲೋಕಾವೃತಂ-ಲೋಕಗಳನ್ನೆಲ್ಲಾ ಸುತ್ತಿಕೊಂಡು, ಲೋಕದಲ್ಲಿರುವ ಪ್ರಜೆಗಳನ್ನೆಲ್ಲಾ ಆವರಿಸಿಕೊಂಡು, ಅವರ ಮೇಲೆಲ್ಲ ಪ್ರಸರಿಸಿ.

೧೯ ಕೊಡನಣುಗ-ಕುಂಭಸಂಭವನಾದ ಅಗಸ್ತ್ಯನು; ಅಗಸ್ತ್ಯನ ಪತ್ನಿಯು ಕಾವೇರೀನದಿಯಾಗಿ ಪ್ರವಹಿಸಿ ಸಮುದ್ರವನ್ನು ಸೇರಿದಳೆಂದು ಪೌರಾಣಿಕ ಕಥೆ. ಇಂಬು-ಆಶ್ರಯ. ಅಳಿಯ-ಸಮುದ್ರನಿಗೆ ರಾಮನು ಹೇಗೆ ಅಳಿಯ? ವಜ್ರಿ-ಇಂದ್ರನು, ಎಡೆಗೊಂಡುದಂ-ಆಶ್ರಯಹೊಂದಿದ್ದನ್ನು; ದುರ್ವಾಸಶಾಪದಿಂದ ಸ್ವರ್ಗಭ್ರಷ್ಟನಾಗಿ ಸಮುದ್ರಮಧ್ಯದಲ್ಲಿ ಒಂದು ದ್ವೀಪದಲ್ಲಿ ವಾಸ ಮಾಡುತ್ತಿದ್ದನೆಂದು ಪೂರ್ವಕಥೆ. ಎನ್ನಿಂದ ಅಖಿಳಸಂಪದವಂ-ಐರಾವತ,

ಉಚ್ಚೈಶ್ರವಸ್ಸು, ಕಾಮಧೇನು, ಚಿಂತಾಮಣಿ, ಕಲ್ಪವೃಕ್ಷ, ಅಮೃತ ಮುಂತಾದ ಸಕಲೈಶ್ವರ್ಯವನ್ನು. ಒದರಿ-ಗರ್ಜಿಸಿ. ಎನ್ನೊಡೆಯನಾದ ಮೃಡ-ಶಿವನು ವಿಷಮಂ-ಕೇಡನ್ನು. ಎಣಿಸ-ಎಣಿಸಲಿಲ್ಲ. ಈ ಪದ್ಯದಲ್ಲಿ ಯಾವ ನೀತಿಯನ್ನು ಕವಿಯು ಬೋಧಿಸುತ್ತಾಳೆ ಹೇಳಿ ?

೨೦ ಗಂಭೀರಭಾವ-ಆಳವಾಗಿರುವಿಕೆ ; ದೊಡ್ಡಗುಣ. ಸತ್ವಾತಿಶಯ-ಅನೇಕ ಪ್ರಾಣಿಗಳಿರುವಿಕೆ ; ಬಲಾಧಿಕ್ಯ. ವಾಹಿನೀನಿಕರ-ನದಿಗಳ ಗುಂಪು ; ಸೇನಾ ಸಮೂಹ. ಅಪತ್ಯ-ಪುತ್ರ.

೨೧ ಸಮುದ್ರನು ತಾನೇ ಸರ್ವಶ್ರೇಷ್ಠನೆಂದು ಹೇಳಿಕೊಳ್ಳುತ್ತಾನೆ. ರಾಜಂ-ದೊರೆ, ಚಂದ್ರ. ಧೂತಪಾಪೆ-ಗಂಗೆ ; ಅವಯವಾರ್ಥವೇನು ? ಹರಿಯು ಮನೆಯಳಿಯನು, ರತಿಕಾಮರು ಮಮ್ಮಕ್ಕಳು–ಹೇಗೆ ಎಂಬುದನ್ನು ಹೇಳಿ ? ಗೋತ್ರರಾಜ ಮಾವ–ಹಿಮವಂತನ ಮಗಳಾದ ಗಂಗೆಯು ಸಮುದ್ರರಾಜನಿಗೆ ಹೆಂಡತಿ, ಆದ್ದರಿಂದ ಅವನು ಮಾವನಾದನು. ಪವಿತ್ರನು-ಶ್ರೇಷ್ಠನು. ಪಾರ್ವತಿ ಅತ್ತಿಗೆ–ಪಾರ್ವತಿಯೂ ಗಂಗೆಯೂ ಹಿಮವಂತನ ಹೆಣ್ಣುಮಕ್ಕಳು, ಗಂಗೆಯು ಸಮುದ್ರನ ಹೆಂಡತಿ, ಆದ್ದರಿಂದ ಪಾರ್ವತಿ ಅತ್ತಿಗೆಯಾದಳು.

೨೨ ಇಲ್ಲಿ ಸಮುದ್ರವನ್ನು ಒಬ್ಬ ಚಕ್ರವರ್ತಿಯಂತೆ ಉತ್ಪ್ರೇಕ್ಷಿಸಿದೆ. ಭೂಭೃತ್ಕುಲಂ-ಬೆಟ್ಟಗಳ ಸಾಲು ; ರಾಜರ ಸಮೂಹ. ಪುಲ್ಗೆಣೆಯಲ್ತೆ-ಹುಲ್ಲಿಗೆ ಸಮಾನವಲ್ಲವೆ ; ಸರಿಸಮನಲ್ಲ.

೨೩ ಸಮುದ್ರನು ಧಾರ್ಮಿಕರಲ್ಲಿ ಅಗ್ರಗಣ್ಯನೆಂದು ವರ್ಣಿಸಿದೆ. ಕರಿ, ತುರಗ, ಧೇನು, ನವರತ್ನ, ಕಲ್ಪಭೂರುಹ, ಪಿಯೂಷ (ಅಮೃತ)-ಇವುಗಳನ್ನು ಇಂದ್ರನಿಗೂ ; ಕನ್ಯೆ, ವಸ್ತ್ರ, ಆಭರಣ (ಕೌಸ್ತುಭ), ಗೇಹಗಳನ್ನು ವಿಷ್ಣುವಿಗೂ, ಭೂಮಿಯನ್ನು ಪರಶುರಾಮನಿಗೂ, ದೇಹವನ್ನೂ (ಪಾನಮಾಡಿದ್ದರಿಂದ) ಅಗಸ್ತ್ಯನಿಗೂ ಕೊಟ್ಟನು. ಭೂ–ಪರಶುರಾಮನು ಸಕಲರಾಜರನ್ನೂ ಕೊಂದು ತನ್ನದಾಗಿ ಮಾಡಿಕೊಂಡ ಭೂಮಿಯೆಲ್ಲವನ್ನು ಬ್ರಾಹ್ಮಣರಿಗೆ ದಾನ ಕೊಟ್ಟಮೇಲೆ ತನಗೆ ನಿಲುಕಡೆ ಇಲ್ಲದೆ ಹೋಗಲು, ವಾಸಮಾಡಲು ಸಮುದ್ರನಿಂದ ಉಡುಪಿ ಕ್ಷೇತ್ರವನ್ನು ಬೇಡಿ ಸಂಪಾದಿಸಿಕೊಂಡನೆಂದು ಪೂರ್ವಕಥೆ. ಸಮುದ್ರನು ತನ್ನ ಹೆಂಡತಿಯನ್ನು ಕಾಮಿಸಿದ್ದರಿಂದ ಅಗಸ್ತ್ಯನು ಕೋಪಿಸಿಕೊಂಡು ಕುಡಿದುಬಿಟ್ಟನೆಂದು ಪೂರ್ವಕಥೆ. ನೀರದ-ಮೇಘ. ಜೀವನ-ನೀರು, ಪ್ರಾಣ. ಇಲ್ಲಿರುವ ಅಲಂಕಾರಕ್ಕೆ ಅರ್ಥಾಂತರನ್ಯಾಸವೆಂದು ಹೆಸರು.

೨೪ ಅಮೃತ, ವಿಷ, ಪಯ, ಶರ, ಕೀಲಾಲ, ಕುಶ, ರಸ-ಈ ಪದಗಳೆಲ್ಲಾ ನೀರು ಎಂಬುದರ ಪರ್ಯಾಯ ಪದಗಳು. ಸುರರಿಗೆ ಅಮೃತಬೇಕೆ, ನನ್ನಲ್ಲಿ ಇನ್ನೂ ಉಂಟು; ಅಮೃತವಿದೆ, ಹೇಗೆ? ತನ್ನಲ್ಲಿ ಅಮೃತ-ನೀರು ಇಲ್ಲವೆ? ಎಂದು ಸಮುದ್ರನು ಹೇಳುತ್ತಾನೆ. ಹೀಗೆಯೇ ಎಲ್ಲಾ ಕಡೆಯಲ್ಲಿಯೂ ಅರ್ಥಮಾಡ ಬೇಕು. ಬಾಲಚಂದ್ರನು ಮಗುವಾದ್ದರಿಂದ ಪಯ-ಹಾಲು ಬೇಕಲ್ಲವೆ? ಕೀಲಾಲ-ರಕ್ತ. ಲಾವಣ್ಯಂ-ಲವಣಸಂಬಂಧವಾದದ್ದು (ಉಪ್ಪುನೀರು.) ಕುಶ-ದರ್ಭೆ.

೨೫ ಸತ್ವ- ಪ್ರಾಣಿ, ಬಲ. ಉರ್ಚಿ-ಮೇಲುನುಗ್ಗಿ. ಮಯ್ಗರೆವ-ಅಡುಗುವ. ರಾಜೀವ-ಒಂದು ಬಗೆಯ ಮೀನು. ಆಜೀವ-ಆ ಪ್ರಾಣಿ. ರಂಗದಿಂ-ಕುಣಿತ ದಿಂದ ಏಳುವ. ಇರ್ಚಿಡಿದ-ತುಳಿತದಿಂದ ಕತ್ತರಿಸಲ್ಪಟ್ಟ. ವಿದ್ರುಮವಿತಾನ-ಹವಳದ ಬಳ್ಳಿಗಳ ಸಾಲು. ತಾನ-ಸ್ಥಾನ. ನೆಗಲ್-ಮೊಸಳೆ, ಶಿಂಶುಮಾರ.

೨೬ ಪಟ್ಟುಳಿದು-ಹಿಡಿತದಿಂದ ತಪ್ಪಿಸಿಕೊಂಡುಹೋದ. ಬಾಳೆ-ಬಾಳೆಮೀನು. ಕಚ್ಚೆಸಕದಿಂ=ಕಡಿದು+ಎಸಕದಿಂ-ಮಹಾಸಾಹಸದಿಂದ; "ನೊಟ್ಟುಗೂ ಡದೆ" ಎಂದು ಪಾಠಾಂತರವಿದೆ.

೨೭ ಗಿರಿಸುತಾ-ಪಾರ್ವತಿ; ಗಂಗೆ. ಕೇತನ-ಧ್ವಜ; ವಿಸ್ತಾರ. ಆತ್ಮಸಂಭವ-ಅನಂಗನಾದ ಮನಸಿಜನು (ಮನ್ಮಥನು). ಲಾವಣ್ಯಲೀಲೆ-ಉಪ್ಪಿನಲೀಲೆ; ಸೌಂದರ್ಯದ ಲೀಲೆ. ಭವನಂತೆ ಗಿರಿಸುತಾನ್ವಿತನೆಂದೆನಿಸಿ ಭವನಲ್ಲ. ಹೀಗೆಯೇ ಎಲ್ಲಾ ಕಡೆಯಲ್ಲಿಯೂ ಅನ್ವಯಿಸಿಕೊಳ್ಳಬೇಕು. ಇಲ್ಲಿ ವಿರೋಧಾಭಾಸಾಲಂಕಾರವಿದೆ.

೨೮ ಏಱುಟಿಯೆ-ಉಬ್ಬರವಿಳಿತಗಳು.

೨೯ ಸಮುದ್ರವರ್ಣನೆಯಲ್ಲಿಯೂ, ಆಕಾಶವರ್ಣನೆಯಲ್ಲಿಯೂ ಮೇಷ, ವೃಷಭ, ಮಿಥುನ, ಕಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನಸ್ಸು ಎಂಬ ಪದಗಳು ಬರುವುದರಿಂದ ರಾಶಿರಾಶಿಯನಾಂತ ಗಗನದಂತೆ ಸಮುದ್ರವಿದೆ ಎಂದು ವರ್ಣಿಸಿದೆ. ೧ ಎಂದರೆ ಸಮುದ್ರಪರದಲ್ಲಿ— ಹರಿಮಿಥುನ-ಹರಿಯಮಿಥುನ, (ನೀರುಕುದುರೆ ಮತ್ತು ಬಡಬಾಗ್ನಿ); ೨ ಎಂದರೆ ಗಗನಪರದಲ್ಲಿ ಸಿಂಹರಾಶಿ, ಮಿಥುನರಾಶಿ. ಅನಿಮೇಷ-೧ ಮೀನು, ೨ ದೇವತೆಗಳು. ದ್ರೋಣಂ-೧ ಹಡಗು, ಗಗನಪರದಲ್ಲಿ ಇದನ್ನು ಬಿಟ್ಟುಬಿಡಬೇಕು. ಧನುಷ್ಕೋಟಿ-ಕ್ಷೇತ್ರ. ವೃಷ-೧ ಪಾಪ, ೨ ವೃಷಭ. ಇಂದ್ರನಿಗೆ ವೃತ್ರಾಸುರನ ಸಂಹಾರದಿಂದುಂಟಾದ ಪಾಪದಲ್ಲಿ ಸ್ವಲ್ಪಭಾಗ ಸಮುದ್ರ ರಾಜನನ್ನು ಸೇರಿತೆಂದು ಪೂರ್ವಕಥೆ.

೩೦ ಪೆಱತೊಂದು ಬಗೆ-ಉಪಾಯಗಿರುವಿಕೆ. ಭಂಗ-ಅಲೆ.

೩೧ ಅಕೂಪಾರ-ಸಮುದ್ರ. ಅಕ್ಕಜ,-ಆಶ್ಚರ್ಯ.

೩೨ ಯಾವಳಿಗೆ ಯಾವುದರಲ್ಲಿ ಪರಿಚಯು ಹೆಚ್ಚೋ ಅವಳು ಅದನ್ನು ಚೆನ್ನಾಗಿ ಪರಿಶೀಲಿಸಿ ತಿಳಿಯಬಲ್ಲಳು. ಹೀಗಿರುವುದರಿಂದ ಎಲೌ ಸೀತೆ, ನೀನು ಕಂಬು ಕಂಧರೆ, ಶಂಖದ ಸ್ಥಿತಿಯನ್ನು ತಿಳಿಯಬಲ್ಲೆ, ಆದ್ದರಿಂದ ಅವುಗಳನ್ನು ನೋಡು. ಈರೀತಿಯಲ್ಲಿ ಸಂಬೋಧನೆಗಳಲ್ಲಿರುವ ವಿಶೇಷಣ ಸ್ವಾರಸ್ಯವನ್ನು ಊಹಿಸಿಕೊಳ್ಳಿರಿ.

೩೩ ದೂಷಣನ ದುರ್ಮಾರ್ಗದಂತೆ ಅಡಿಗಡಿಗೆ ತೋರ್ಪ ಪೆರ್ದೆರೆಗಳ್—ತೆರೆ ಗಳೂ ಅಡಿಗಡಿಗೆ ತೋರುತ್ತವೆ ; ದುರ್ಮಾರ್ಗವೂ ಅಡಿಗಡಿಗೆ ಕಾಣಿಸಿ ಕೊಳ್ಳುತ್ತದೆ ; ಆದ್ದರಿಂದ ಉಪಮಾನದಲ್ಲಿ ಔಚಿತ್ಯವಿದೆ. ಹೀಗೆಯೇ ಮುಂದೆ ಯೂ ಅನ್ವಯ.

೩೪ ರಾಜರಾಜವಿಮಾನಂ-ಕುಬೇರನ ವಿಮಾನ ; ಅದನ್ನು ರಾವಣನು ಕಿತ್ತು ಕೊಂಡು ತನ್ನಲ್ಲಿ ಇಟ್ಟಿದ್ದನು ; ಆ ವಿಮಾನದಲ್ಲಿ ಈಗ ರಾಮನು ಹೊರ ಟಿರುವನು.

೩೫-೭ ತನೂರುಹ-ರೆಕ್ಕೆ. ಬಲವೈರಿ-ಇಂದ್ರ. ಮಿತ್ರಸೂತಸುತ-ಜಟಾಯು. ರಾಜರಾಜಸಖ-ಈಶ್ವರನು ; ಹೇಗೆ ? ದಿತಿಜ-ಇಲ್ಲಿ ರಾವಣ. ಸೌರಿಪುತ್ರಿ-ಸ್ವಯಂಪ್ರಭೆಯೆಂಬವಳು. ಬಟಿವಿಡಿದ-ಹತ್ತಿರ ಬಂದ ; ಬಟಿ ಶಬ್ದದ ನಾನಾ ರ್ಥವೇನು ? ಕೀಶಬಲ-ಕಪಿಸೇನೆ. ದುಗುಡ-ದುಃಖ.

೩೮ ಅಂದು-ರಾವಣನು ಸೀತೆಯನ್ನಪಹರಿಸಿ ಒಯ್ಯುತ್ತಿದ್ದ ಕಾಲದಲ್ಲಿ. ಕುಮಾರಂ-ಪುತ್ರ. ಕುಮಾರಂ—ಕು-ಭೂಮಿಯಲ್ಲಿ, ಮಾರಂ-ಮನ್ಮಥನಂತೆ ಸುಂದರನು. ಕುಮಾರಂ—ಕು-ಕುತ್ಸಿತರನ್ನು ಎಂದರೆ ದುಷ್ಟರನ್ನು ಮಾರಂ-ಶಿಕ್ಷಿಸುವವನು, ದುಷ್ಟಶಿಕ್ಷಕನೆಂದರ್ಥ.

೩೯-೪೧ ರಥಂ-ಪುಷ್ಪಕವಿಮಾನವು. ಸುಟ್ಟುವೆರಲ್-ತರ್ಜನಿಯೆಂಬ ಬೆಟ್ಟು ; ಇಲ್ಲಿ ಸುಟ್ಟು ಎಂಬ ಪದಕ್ಕೆ ತೋರಿಸುವ ಎಂದರ್ಥ. ಒಸಱೆ-ಕಣ್ಣೀರು ಸ್ರವಿ ಸಲು. ಚೆಂದುಟಿ, ನಿಟ್ಟುಸಿರ್-ಇವುಗಳಿಗೆ ವಿಗ್ರಹವಾಕ್ಯವನ್ನು ಹೇಳಿ. ಖಳನಂ-ರಾವಣನನ್ನು. ವರ್ಮ-ವ್ಯೆಜೋಡು, ಕಬ್ಬಿಣದ ಕವಚ ; ಇಲ್ಲಿ ರೆಕ್ಕೆ ಯ ಬಲ. ಬವರ-ಯುದ್ಧ.

೪೨-೩ ಭಗಣೇಶ-ಚಂದ್ರ, ಹೇಗೆ ? ಪರೆದು-ಹರಡಿಕೊಂಡು. ಒಪ್ಪಂಬಿಡು-ಒಳ್ಪನ್ನು ಬಿಡು, ಸೊಗಸನ್ನು ಕಳಕೊಂಡು. ಕಾರಿರುಳ್-ಈ ಸಮಾಸದಲ್ಲಿ ವಿಶೇಷ

ವೇನು ? ನೋಟಕಳವಟ್ಟುದಿಲ್ಲ- ರಥದ ವೇಗದಿಂದ ಭೂಮಿಯು ಚೆನ್ನಾಗಿ ಕಾಣಿಸಲಿಲ್ಲ. ಸಾಟಿದೋರದೆ-ಉಪಮಾನರಹಿತವಾಗಿ. ಪವನಾಧ್ವ-ಆಕಾಶ, ಹೇಗೆ ?

೪೪-೭ ಸಹಚರಂ ಪವನಂ ಅನುಮಾನಗೊಳೆ ಎಂದನ್ವಯ ; ವಾಯುವು ಸಹಚರನು ಹೇಗೆ ? ಅಚಲಮುಖ್ಯ-ಚಿತ್ರಕೂಟ. ವ್ಯೆಯೊಳ್ ಬತ್ತಿ-ಕೃಶನಾಗಿ. ಇರೇಟು-ಸಮಾಸ ಹೇಗೆ ? ಎಱಕ-ಪ್ರೀತಿ. ಅಣೆ-ಆಜ್ಞೆ, ಭಾಷೆ. ಊಣೆಯ-ತ್ಸ. ನ್ಯೂನತೆ, ಕೊರತೆ.

೪೮-೫೩ ಅಮಿತ್ರಾನುಜ-ಶತ್ರುವಿನಂತಿರುವ ತಮ್ಮ. ವಳಕ್ಷ-ಬಿಳುಪಾದ, ಪರಿಶುದ್ಧವಾದ. ವಿಪಕ್ಷತ್ರಿಪುರವೈರಿ-ಈಶ್ವರ, ಹೇಗೆ ? ನೋಂಪು-ವ್ರತ. ಗಾಡಿ-ಸೌಂದರ್ಯ. ಪಟ್ಟು-ಮಲಗಿ, ಧಾತುವೇನು ? ಇಱಿಸಲ್-ಹೊಸಗನ್ನಡ ಇರಿಚಲು. ಬಗ್ಗದೊವಲ್-ಹುಲಿಯ ಚರ್ಮ. ಎಂತು+ಇಂಬು+ಅಕ್ಕು. ಬಿದುಗಲ್ನೆಲ-ಚಂದ್ರಕಾಂತಶಿಲೆಯು ಹಾಸಿದ ನೆಲ. ಕಾಪಥ-ಕುತ್ಸಿತಮಾರ್ಗ, ಕಲ್ಲು ಮುಳ್ಳು ಇಡಿದ ದಾರಿ.

೫೪ ವನ ವನಜ ವನಚರರ–ವನಗಳನ್ನೂ ವೃಕ್ಷಮೃಗಾದಿಗಳನ್ನೂ ಕಪಿಗಳನ್ನೂ. ಕುಡಿದಿಟ್ಟಿ-ಲತೆಯ ಕುಡಿಯಂತೆ ವಕ್ರವಾದ ನೋಟ.

೫೫ ಇದು (ಎದುರಿಗೆ ಕಾಣುವಂಥದು) ಸಾಲಮಲ್ಲ; ಇದು ಕಂದರಂ-(ಬೆಟ್ಟದ ತಪ್ಪಲು), ಭುವನ ರಾಜಿಯಲ್ಲ (ದೇಶಗಳಲ್ಲ); ಇದು ಮಹೀಧ್ರಶ್ರೇಣೀಕಟಕಂ, (ಬೆಟ್ಟದ ಸಾಲುಗಳಿರುವ ಪ್ರದೇಶ) ಹರ್ಮ್ಯಾಗ್ರಮಲ್ಲ ; ಇದು ಉತ್ಸಂ-(ಒರತೆ), ಕೊಳನಲ್ಲ ;....ಈ ಜನಗಳ್ ಮೃಗಗಳಲ್ಲದೆ ಅಲ್ಲ– ಎಂದನ್ವಯ. ರಾಮನಿಲ್ಲದುದರಿಂದ ಸಾಲ ಮುಂತಾದುವು ಅವುಗಳ ಮನೋಹರತ್ವವನ್ನು ಕಳಕೊಂಡು ಬೇರೆ ಪದಾರ್ಥಗಳಂತೆ ತೋರಿದುವು ಎಂದು ತಾತ್ಪರ್ಯ.

೫೬ ೩೭ ನೆಯ ಪದ್ಯದ ಟೀಕೆಯನ್ನು ನೋಡಿ. ಅಷ್ಟದಿಕ್ಪಾಲಕರನ್ನು ಸಂಬೋಧಿಸಿ ಭರತನು ಹೇಳುತ್ತಾನೆ.

೬೦ ಏವೇಳ್ವೆಂ-ಏನು ಹೇಳಲಿ, ಇದು ಕವಿಯ ಮಾತು. ಬಲಿ..ರ್ದಂ-ಬಲಿಯಾಗಿ ಬೀಳಬೇಕೆಂದು ಇದ್ದನು. ಅನ್ನಯಂ-ಅನ್ಯಾಯ.

೬೧ ಬಲಿ-ಬಲಿಚಕ್ರವರ್ತಿ. ಕೀೞೆಳೆ=ಕೆಳಗಣ+ಎಳೆ (ತ್ಸ.ಇಳಾ) ಪಾತಾಳಲೋಕ. ಮೆಟ್ಟಿದೆ+ಅ ನವಪದ ಎಂದು ಪದವಿಭಾಗ. ಬಾಹುಜನ್ಮರು-ಕ್ಷತ್ರಿಯರು ; ಹೇಗೆ ? ಸಮಾನವು+ಅರ+ಅದಟು (-ಪರಾಕ್ರಮ) ತವದರ್ಪಕೆ-ಎಂದು ಪದವಿಭಾಗ.

೭೩ ಅನಲಂ– ಅಗ್ನಿ ಎಂಬ ಅರ್ಥವುಳ್ಳ ಅನಲ್ ಶಬ್ದದ ದ್ವಿತೀಯೆ. ಉರುಪು-ಇಲ್ಲಿ ಹೊಗೆಯ ವೇಗ. ಒತ್ತುಗೊಂಡು-ಸಹಾಯಹೊಂದಿ. ಎತ್ತಣ-ಯಾವ ಕಡೆಯಲ್ಲಿ ಜನರುಟಿದು-ಜನರು ಸ್ಥಳಕೊಟ್ಟು. ಸ್ಯೆಪಿಡಿದು-ಚೆನ್ನಾಗಿ ಹಿಡಿದು ಕೊಂಡು, (ಭರತನಂ ಎಂದು ಅಧ್ಯಾಹಾರ); ಸ್ಯೆ ಎಂಬ ಉಪಸರ್ಗವು ಆಧಿಕ್ಯಾರ್ಥದಲ್ಲಿ ಧಾತುಗಳ ಹಿಂದೆ ಸೇರುವುದುಂಟು ; ಪ್ರ. ಸ್ಯೆಗರೆ, ಸ್ಯೆವರಿ.

೭೪ ಆಶುಶುಕ್ಷಣಿ-ಅಗ್ನಿ. ದಕ್ಷಿಣಾಶೆ+ಅದು+ಅತ್ತಣಿಂ-ಆದಕ್ಷಿಣದಿಕ್ಕಿನದೆಸೆಯಿಂದ. ಬರ್ದುಕ-ಮರಣ. ಅಮರ್ದುಕ-ಅಮೃತ. ಬರ್ದೇಶನಮರ್ದೇ-ಸಾಯುವುದು ಸುಖಕರವೇ ಏನು ?

೭೫ ಅನುಗತರಾದ ಭಕ್ತರ ಚಿತ್-ಮನಸ್ಸಿಗೆ ಆರಾಮಂ-ವಿಹಾರಸ್ಥಾನವಾದ ಎಂದರೆ ಸುಖಕರನಾದ. ಸೋಮ-ಶಿವ, ಹೇಗೆ ? ಸೋಮಪುರ-ಚಂದ್ರಪುರ, ಉಡುಪಪುರ, ಉಡುಪಿ ಎಂದು ಈಗ ಕರೆಯಲ್ಪಡುವ ಕ್ಷೇತ್ರ.

## ನಾಲ್ಕನೆಯ ಸಂಧಿ

೧ ಅಕ್ಷಿಯಂ ಕಿವಿಯಂ ನಂಬದೆ ಎಂದನ್ವಯ. ಅನುಮಾನಮುಖದಿ-ಅನುಮಾನ ಪ್ರಮಾಣದ ಮೂಲಕ. ಭವಭವಾಂತರ-ಜನ್ಮಜನ್ಮಾಂತರ. ತನ್ನವಂ-ತನ್ನ ವಂಶದಲ್ಲಿ ಹುಟ್ಟಿದವನು.

೨ ಮನಗುಟ್ಟು-ಮನದಲ್ಲಿ ಕುಟ್ಟು ಎಂದರೆ ನೋವು, ಹಿಂಸೆ. ಕಡುಪು-ಸ್ಥೈರ್ಯ. ಹನುಮನಂ ದಿಟ್ಟಿಸಲ್ ಭಯಮೊರ್ಮೆ....ಪುಟ್ಟಿದುದು ; ಅವನ ನುಡಿಗೇಳ್ದೊಡೆ ಸಟೆಯೊರ್ಮೆ....ಪುಟ್ಟಿದುದು : ಈ ರೀತಿ ಭಿನ್ನಭಿನ್ನವಾಗಿ ವಿಕಾರ ಹುಟ್ಟಲು ಕಾರಣವನ್ನು ಯೋಚಿಸಿರಿ. ಚಂಚಲಮಂ ಬಿಟ್ಟು ಎಂತುಂ ಇರದೆ ಎಂದನ್ವಯ.

೩-೭ ಅಸು-ಪ್ರಾಣ. ಪೊಲಬು-ದಾರಿ, ಇಲ್ಲಿ ಪರಿಚಯ. ಸ್ಕೆಪು-ಪುಣ್ಯ, ಅದೃಷ್ಟ. ಒಡರ್ಚಲ್ಕೆ-ಪ್ರಾಪ್ತವಾಗಲು. ಅನುವರ-ಯುದ್ಧ. ಎಂತಿರ್ದೊಡಂ ಬಪ್ಪುದಕೆ ತಱಿಸಂದಂ-ನಿಶ್ಚಯಿಸಿದನು. ಬೀಸಿದರ್ ಪೂಸಿದರ್-ತಂಗಾಳಿಹಾಕಿ ಗಂಧಾದಿಗಳನ್ನು ಅರ್ಪಿಸಿದರು ಎಂದರೆ, ಶ್ರಮಪರಿಹಾರವಾಗುವಂತೆ ಪೂಜಿಸಿದರು ಎಂದರ್ಥ.

೮ ಒಟ್ಟರ್-ಮನೆಯನ್ನು ಬಿಟ್ಟು ಹೋಗಿ ನೋಡಲು ಹಿರಿಯರು ಇಷ್ಟಪಡರು. ಒಟ್ಟಿಗನನಿಟ್ಟು- (ಸೇರಿಕೊಂಡಿರುವವನ ಎಂದರೆ) ಸೇವಕನನ್ನು ಎಂದು ಅರ್ಥ, ಅಥವಾ ಒಂಟಿಗನನು-ಒಂಟಿಯಾಗಿ ಮಗುವನ್ನು ಬಿಟು ಎಂದು ಅರ್ಥ.

ಒಟ್ಟಜ-ಕಪ್ಪ ; ಒಟ್ಟಜದ ಪಟ್ಟಣಿಗರ್-ಹೆಚ್ಚಾಗಿ ತೆರಿಗೆಕೊಡುವ ಮುಖಂಡ ರಾದ ನಾಗರಿಕರು. ದಿಟ್ಟಿಗೆಡೆಗೊಟ್ಟು ಬಟ್ಟೆಯಂ ಮೆಟ್ಟಿಬರೆ (- ಎಲ್ಲರಿಗೂ ಕಾಣಿಸುವಂತೆ ಒಬ್ಬನು ದಾರಿಯಲ್ಲಿ ಬರಲು) ಒರ್ವಳ ಪಿಂದಟ್ಟಿ ಕೊಟ್ಟಿಪೊ ಱಮಟ್ಟಳು-ಒಳಮನೆಯಿಂದ ಹೊರಟಳು.

೧೦ ತೆಳ್ಗದಪು-ಸೊಗಸಾದ ಕೆನ್ನೆ. ನೇರ್ಪಣೆ-ನೇರಿತ್ತಾದ (ಅಮರಿರುವ) ಹಣೆ. ಕನ್ನದೊಡವು-ಕರ್ಣಾಭರಣ. ನವಿರಂ-ಕೂದಲನ್ನು. ಅಣಿಗೆ-ಬಾಚಣಿಗೆ.

೧೧ ಪಂಡಿತ-ಪಂಡಿತ ವಕ್ಕಿ, ಗಿಳಿ. ಕೆಂಗಣ್ಣ-ಕೋಗಿಲೆ. ಎಳದಳಿರ್-ಇಲ್ಲಿ ಮಾವಿನ ಚಿಗುರು. ಅವುಗಳು ಸದ್ದುಮಾಡದಿರಲೆಂದು ಅವುಗಳಿಗೆ ಆಹಾರವನ್ನು ಕೊಟ್ಟು.

೧೨ ಮತಿ ಮನವನಪ್ಪೆ-ಇಷ್ಟುಪ್ರಕಾರ ಮನಸ್ಸನ್ನು ಮಾಡಿಕೊಂಡು. ಅತಿಬಲಾ ಯನ-ಇಲ್ಲಿ ವಾತಾಯನ (ಕಿಟಿಕಿ) ಎಂಬ ಅರ್ಥದಲ್ಲಿ ಪ್ರಾಸಿಗೋಸ್ಕರ ಉಪಯೋಗಿಸಲ್ಪಟ್ಟಿದೆ.

೧೩ ಬೆಲ್ಲವತ್ತಂಗೆತ್ತು-ಬಿಲ್ವಪತ್ರೆ ಎಂದು ಭ್ರಮಿಸಿ. ಮಥಿತಮಂ-ಮೊಸರನ್ನು.

೧೩-೭ ಬಿಸಿಗೆ-ಬಿಸಿಯಾಗಿರುವುದಕ್ಕೆ. ಆವಿಗೆಯೊಳ್-ಬೆಂಕಿಯ ಕುಂಡದಲ್ಲಿ. ತುಱು ವಿಂಡು-ಹಸುಗಳ ಮಂದೆ. ಪಿಡಿಗೋಲು-ಕೈಯಲ್ಲಿ ಹಿಡಿಯುವ ಬೆತ್ತ. ಐಸರ-ಐದೆಳೆಯ ಸರ. ಬಿಡುನಿಱಿ-ಸಡಲಿ ಹೋದ ನಿರಿ. ಕಾಡ್ತೊಱೆಯಂತೆ-ಕಾಡಿನಲ್ಲಿ ಹೊಳೆಗಳು ನಾನಾದಿಕ್ಕುಗಳಿಂದ ಬಂದು ಸೇರುವ ಹಾಗೆ. ನಿಕ್ಕುವ-ನಿಶ್ಚಯ. ಅಕ್ಕಱದೆ-ಪ್ರೀತಿಯಿಂದ. ವಿದಗ್ಧೆ-ಪ್ರೌಢಳಾದ ಸ್ತ್ರೀಯು.

೧೮ ೧೭ ನೆಯ ಪದ್ಯದಲ್ಲಿ ಕೇಳಿರುವ ಪ್ರಶ್ನೆಗಳಿಗೆಲ್ಲಾ ಸಂಯೋಜನೆ ಮಾಡಿ ಉತ್ತ ರವನ್ನು ಈ ಪದ್ಯದಲ್ಲಿ ಹೇಳಿದೆ.

೧೯-೨೩ ರಯ-ತ್ಸ. ರಮ್ಯ. ಅಱಿಯಾಸೆ-ತುಚ್ಛವಾದ, ವ್ಯರ್ಥವಾದ ಆಸೆ. ಬೆರಲೇ ಡುವರ್-ಬೆರಲೆತ್ತಿತೋರಿಸುವರು. ಸಂತಮಿರ್ಪುದು-ನೆಮ್ಮದಿಯಾಗಿರಿ. ನಿರು ಪಾಧಿಯಿಂ-ಯಾವ ಉಪಾಧಿಯೂ (-ತಡೆಯೂ) ಇಲ್ಲದೆ. ಸೀಮಂತಿನೀ—ಸ್ತ್ರೀ. ಮನಂ ತೊಡರದು-ಮನಸ್ಸು ಮುಟ್ಟದು, ನಿಶ್ಚಯಿಸಲು ಆಗದ ಹಾಗೆ. ಸೋಲಲ್-ಮೋಹ ತಟ್ಟುವ ಹಾಗೆ. ಬಿಸವಂದ-ಆಶ್ಚರ್ಯ. ಪಾಱ್-ವಿಮಾನ.

೨೪ ಚಂದ್ರೋದಯದಲ್ಲಿ ಉಂಟಾಗುವ ವ್ಯಾಪಾರಗಳನ್ನು ರಾಮನೆಂಬ ಚಂದ್ರನ ಉದಯದಲ್ಲಿ ನಿರೂಪಿಸಿದೆ. ಅಗೆ-ಪೈರು.

೨೫ ಬಾನ್ದಟಂ-ಆಕಾಶದ ತಟ ; ಪ್ರಾಸಸ್ಥಾನದಲ್ಲಿ ಬರುವ ಸಂಯುಕ್ತಾಕ್ಷರಗಳಲ್ಲಿ ಒಂದಕ್ಕೆ ಮಾತ್ರ ಪ್ರಾಸನ್ನು ಕೊಟ್ಟು ಕವಿತ್ವಮಾಡುವ ಪದ್ಧತಿ ಷಟ್ಪದಿಗಳಲ್ಲಿ

ರೂಢಿಯಾಗಿದೆ. ಇಲ್ಲಿ ೞ್ದ, ನ್ದ ಎಂಬವಿವು ಪ್ರಾಸಸ್ಥಾನಗಳಲ್ಲಿವೆ. ಸ್ನೆವರಿದುದು-ಅತಿಯಾಗಿ ಹರಿದುಹೋಯಿತು. ಭರತನ ಕಣ್ಬುರುಳಿ-ಕಣ್ಣೆಂಬ ಪೆಣ್ಗಿಳಿಯು ರಾಮಸಹಕಾರದಿ- ರಾಮನೆಂಬ ಮಾವಿನ ಮರದಲ್ಲಿ, ಸೂಟ್ಟಿ ರುಗುತ-ಬಾರಿಬಾರಿಗೆ ಸುತ್ತುತ್ತ, ಅಡಿವೇರನೇರ್ದು-ಬುಡವನ್ನು ಹತ್ತಿ, ಕಾಲ್ಗವಲನೊಳ್-ಕಾಲುಗಳೆಂಬ ಕವಲುಗೊಂಬೆಗಳಲ್ಲಿ ತೂಳ್ದು-ನುಗ್ಗಿಕೊಂಡು ಹೋಗಿ, ಅಟ್ಟೆಗೊಂಬಿಂಗೆ-ಮೈಯೆಂಬ ದೊಡ್ಡ ಕೊಂಬೆಗೆ, ಅಡರ್ದು-ಹತ್ತಿ, ನಗೆವೊಗದ-ನಗೆಯಿಂದ ಮನೋಹರವಾಗಿರುವ ಮೊಗವೆಂಬ ಪಣ್ಣಿನೊಳ್ ಹಣ್ಣಿನೊಳಗೆ ದಿಟ್ಟಿಗೊಂಡುದು-ನೋಟವನ್ನು ಹಾಕಿತು, ನೋಡಿತು—ಎಂದರೆ ತಾತ್ಪರ್ಯವೇನು ?

೨೬ ಈ ಪದ್ಯದಲ್ಲಿ ಅಗ್ರಜನ ದರ್ಶನಕ್ಕೆ ಹೊರಟ ಭರತನ ಸ್ಥಿತಿಯನ್ನು ಭಗವದ್ದರ್ಶನಕ್ಕೆ ಹೋಗುವ ಭಕ್ತನ ಅವಸ್ಥೆಗೆ ಹೋಲಿಸಿದೆ. ಕೀೞ್ಪರಿವ-ಕೆಳಕ್ಕೆ ಹರಿಯುವ. ಬಲಿದ-ನೆಟ್ಟ. ನವಿರುಡೆಯುನ್ನುಟ್ಟು-ರೋಮಾಂಚವೆಂಬ ವಸ್ತ್ರವನ್ನು ಉಟ್ಟು. ಇಂಬುಗೊಂಡ-ಸೇರಿಕೊಂಡ. ನೀಡುಂ-(ಅವ್ಯಯ,) ಅಧಿಕವಾಗಿ. ತಡೆ....ದೇಗಿ-ತಡೆಯುವ ಉಸಿರನ್ನು ತೇಗಿ, ಬಿಟ್ಟು, ಎಂದರೆ ತಡೆದು ತಡೆದು ಉಸಿರನ್ನು ಬಿಟ್ಟು. ನಱುದಂಬುಲಂ-ಸುವಾಸಿತವಾದ ತಾಂಬೂಲವನ್ನು.

೨೭ ಪಿರಿದು-(ಅವ್ಯಯ) ಅತಿಶಯವಾಗಿ. ಅಡಕಂ ನರಳ್ದ-ಸ್ತಂಭನದಿಂದ ಹಿಂಸೆ ಹೊಂದಿದ. ಪಿಡಿಗೊರಲಿಂ-ಹಿಡಿದಂತಿರುವ ಅಥವಾ ಸಣ್ಣಗಿರುವ ಕಂಠದಿಂದ. ಪಿಡಿದೊಡಲಿಗಿನಿತು ವ್ರತದಿನಿರ್ದೊಡೆ-ನಾನು ಎಂದು ಅಧ್ಯಾಹಾರ.

೨೮ ನಿನ್ನನಾರ್....ಸಂಭಾವಿಸುವ—ಯಾರು ನಿನ್ನನ್ನು ಬಗೆವನೆಯಂ-(ಹೃದಯವೆಂಬ ಮನೆಯನ್ನು) ಒತ್ತಿ-ಬಂಧಿಸಿ, ಸಂಭಾವಿಸುವರೊ ಅಂತಹ; ಈ ರೀತಿಯಲ್ಲಿ ಕನ್ನಡ ಭಾಷೆಯಲ್ಲಿ ಯಚ್ಛಬ್ದ ತಚ್ಛಬ್ದಗಳನ್ನು ಪ್ರಯೋಗಿಸದೆ ಕೃದ್ವಾಚಿಪ್ರತ್ಯಯವನ್ನು ಕ್ರಿಯೆಗೆ ಸೇರಿಸಿ ವಿಶೇಷಣವಾಕ್ಯವನ್ನು ಮಾಡುವ ಪದ್ಧತಿ ಹಳಗನ್ನಡದಲ್ಲಿ ಬಹಳವಾಗಿದೆ. ಉದಾ. "ಮದನಂ ತೋಂಟಿಗನಾದ ಚೂತಂ", "ಶ್ರೀರಾಮಾನಟಿ....ವಕ್ಷೋರಂಗಸ್ಥಿತೆಯಾದ ಕೃಷ್ಣಂ." ತವಸಿ- ತ್ಸ. ತಪಸ್ವಿ. ಆಸರೆ-ಆಶ್ರಯ. ಏಗಳುಂ-ಯಾವಾಗಲೂ. ತೋರ್ದುದು-ತೋರಿಸಲ್ಪಟ್ಟಿತು, ಕಂಡಿತು: ಹೀಗೆ ಅಕರ್ಮಕ ಧಾತುವನ್ನು ಸಕರ್ಮಕವಾಗಿ ಪ್ರಯೋಗಿಸುವುದು ಕನ್ನಡದಲ್ಲಿ ರೂಢಿಯಲ್ಲಿದೆ.

೨೯ ಮೆದುಗೈಯೊತ್ತುವ-ಮೆದುಗೈಯಿಂದ ಒತ್ತುವ; ಮೆದು-ತ್ಸ. ಮೃದು. ಎಡೆ-ಎಡೆಯಲ್ಲಿ. ಕಾಲ್ ಕಾಡ ಸುತ್ತೆ, ನಡು ನಾರನು ಉಡೆ, ಕೈ ಊಱುಗೋಲಂ ಪಿಡಿಯೆ, ತೋಳ್ಮಡು-(ಭುಜಶಿರಸ್ಸು) ಬಗಲ್ಗಂಟಿಗೆ ಎಡೆಯಾಗಲು.

೩೦ ಖೋಡಿ-ಕೆಟ್ಟ ಚಾಳಿಯವನು, ಇದು ಮಹಾರಾಷ್ಟ್ರಪದ.

೩೧ ಭಕ್ತರಂ ನೋಟ್ಪು ಅಪಾಂಗದಿಂ-ಕಡೆಗಣ್ಣಿನ ನೋಟದಿಂದ ಅನುಜನ ಕಟಾಕ್ಷಿಸಿ, ರಘುಪುಂಗವಂ-ರಘುವಂಶದಲ್ಲಿ ಶ್ರೇಷ್ಠನಾದ ರಾಮನು, ಪ್ರಣವನವಮೂಲಸೂಕ್ತಿಗಳ್—ಪ್ರಣವ-ಓಂಕಾರಸಹಿತವಾದ, ನವ-ಹೊಸದಾದ, ಮೂಲಸೂಕ್ತಿಗಳ್-ಸಮಸ್ತಸೂಕ್ತಿಗಳಿಗೆ ಮೂಲಭೂತವಾದ ವೇದಸೂಕ್ತಿಗಳು, ಒಗೆದು-ಜನಿಸಿ, ಅಡಂಗಿ-ಅಡಗಿ, ನೆಲೆಗೊಂಡ-ಸ್ಥಿರವಾಗಿ ನಿಂತ ನಲ್ವಾಯಿಯಿಂದ- ಶ್ರೇಷ್ಠವಾದ ವದನದಿಂದ ನುಡಿಸಿದಂ—ಎಂದನ್ವಯ. "ಗತಕಲ್ಪಂ ವೇದಂ ಬ್ರಹ್ಮಣೇ ಉಪದಿಶತಿ" ಎಂಬ ವೇದಭಾಷ್ಯವಚನದ ಆಧಾರದ ಮೇಲೆ ಈ ಕವಿಯು ಪ್ರಳಯಾನಂತರದಲ್ಲಿ ಬ್ರಹ್ಮನಿಗೆ ವೇದಸೂಕ್ತಿಗಳನ್ನು ವಿಷ್ಣು ಹೊಸದಾಗಿ ಉಪದೇಶಮಾಡುವುದರಿಂದ ವೇದಗಳನ್ನು ವಿಷ್ಣುವಿನ ಮುಖದಿಂದ ಒಗೆದ ನವಮೂಲಸೂಕ್ತಿಗಳೆಂಬದಾಗಿಯೂ, ಪ್ರಳಯದಲ್ಲಿ ಎಲ್ಲವೂ ನಷ್ಟವಾಗಿ ವಿಷ್ಣುವು ಒಬ್ಬನೇ ಉಳಿಯುವುದರಿಂದ ಅವನಲ್ಲಿ ಅವು ಅಡಗಿವೆ ಎಂದೂ, ಪ್ರಳಯಾನಂತರ ಬ್ರಹ್ಮಾಂಡವು ಸೃಷ್ಟವಾದ ಮೇಲೆ ಅವು ಅವನಿಂದ ಬ್ರಹ್ಮನ ಉಪದೇಶಕ್ಕಾಗಿ ಪುನಃ ಉಚ್ಚರಿಸಲ್ಪಡುವುವೆಂದೂ ಹೇಳುವಂತಿದೆ. ಶ್ರೀರಾಮನೇ ಜಗತ್ಕಾರಣನಾದ ವಿಷ್ಣುವಿನ ಅವತಾರವಾಗಿರುವುದರಿಂದ ಹೀಗೆ ಹೇಳುವುದು ಉಚಿತವಾಗಿದೆ.

೩೨ ಈರೇಳ್ಕಾಲಂ-ಹದಿನಾಲ್ಕು ವರುಷ; ವರುಷವೆಂಬ ಅರ್ಥದಲ್ಲಿ ಕಾಲಶಬ್ದವನ್ನು ಅದ್ಭುತರಾಮಾಯಣದಲ್ಲಿ ಮಾತ್ರ ಇಲ್ಲಿರುವಂತೆ ಉಪಯೋಗಿಸಿರುವುದೇ ಹೊರತು ಮತ್ತೆಲ್ಲಿಯೂ ಇಲ್ಲ. ಕಿತ್ತಡಿ-ಋಷಿ. ತಿರೆ-ತ್ಸ. ಸ್ಥಿರಾ, ಭೂಮಿ. ದಹನ-ಅಗ್ನಿ. ಕಡುದುಗುಡಂ-ದ್ವಿತೀಯಾರ್ಥದಲ್ಲಿ ಪ್ರಥಮೆಯ ಪ್ರಯೋಗ.

೩೩ ನಡೆನೋಡಿ-ನಡುವಂತೆ ನೋಡಿ, ಪ್ರೀತಿಯಿಂದ ನೋಡಿ. ಧಾ.ಅಮ್ಮು-ಇಷ್ಟಪಡು.

೩೪ ಮೂರ್ವಟಿ=ಮೂಱು+ಬಟಿ (ವಂಶ); ತಾಯಿಯ ವಂಶ, ತಂದೆಯ ವಂಶ, ಗಂಡನ ವಂಶ; ವ್ಯಾಕರಣದ ಪ್ರಕಾರ ಮೂವಟಿ ಎಂದಾಗಬೇಕು. ಪ್ರಾಸದೋಷದ ಭ್ರಾಂತಿಯಿಂದ ಮೂರ್ವಟಿ ಎಂದು ಪ್ರಯೋಗಿಸಿದಹಾಗೆ ತೋರುತ್ತದೆ. ಇದೇ ಸಂಧಿಯ ೨೫ ನೆಯ ಪದ್ಯದಲ್ಲಿ ಪ್ರಾಸವಿಷಯವಾಗಿ ಬರೆದಿರುವ ಟೀಕನ್ನು ನೋಡಿ. ನೂರ್ವಗೆಯೊಳೊರೆಯಲ್ ಸ್ವತಂತ್ರವಾಕ್ಯ (Parenthetical Clause) ಅನಸೂಯೆ-ಅತ್ರಿಮಹರ್ಷಿಗಳ ಮಹಾಪತಿವ್ರತೆಯಾದ ಪತ್ನಿ. ಅರುಂಧತಿ-ವಸಿಷ್ಠಮಹರ್ಷಿಯ ಪತ್ನಿ. ನಿಮ್ಮನು ಆರ್ ಎಣೆಗೆ—ಹೋಲಿಕೆಗೆ ಯಾರು ಬರ್ಪರು?

೩೫ ಬಸವಟಿದು–ಬಸ(-ತ್ಸ. ವಶ), ತನ್ನ ವಶ ತನಗೆ ತಪ್ಪಿ, ದೀನಮನನಾಗಿ. ನಿರ್ನೆರಂ-ಕಾರಣವಿಲ್ಲದೆ,(ಅವ್ಯಯ.) ಮುಮ್ಮೆ ನ್ಯಮಾಟಬೆಸುಗೆ-ಪೂರ್ವಜನ್ಮದಲ್ಲಿ ಮಾಡಿದ ಕರ್ಮದ ಫಲ. ಬೆಸನ-ತ್ಸ. ವ್ಯಸನ, ವ್ಯಾಪಾರ. ನಾಣ್ಣುಡಿಗೆ, ಅಗೆ-ಅಂಕುರವು. ನಸಿನಸಿನೆ-ತಿಳಿಯದ ಹಾಗೆ (?) ನಿನ್ನಿಂದೆ ಒದಗೆ ಎಮ್ಮ ತ್ತಣಿಂ ತೋಱಬೆ ಎಂದನ್ವಯ.

೩೬ ಉಸಿಕನೆ-ಮೌನದಿಂದ, (ಅವ್ಯಯ). ಕಣ್ ಕೊಸಱಬೆ–(ನೋಡುವುದಕ್ಕೆ) ಆಸೆಪಡಲು. ತೂಣಮನಗ್ಗೆದು-ಹುಚ್ಚುಮನಸ್ಸುಮಾಡಿ.

೩೭ ನಿನಗೆ ಪಟ್ಟಣದೊಳಿರಲ್ ನಿನಗೆ ಪುರುಳು ಇಲ್ಲವೆಂದು ಅಂದು ಇದಂ ಆರ್ ಬಡಲೊಳ್ ನಟ್ಟರ್ ಎಂದನ್ವಯ. ಒಡಲೊಳ್ ನಟ್ಟರ್-ಎಂಬುದರ ತಾತ್ಪರ್ಯವೇನು?

೩೮ ಅನುಜ-ಎಲ್ಕೆ ತಮ್ಮ. ಅಡಿನೆಟಲ್ಮಾಕ್ಕೆ-ಅಡಿನೆಳಲ ರೀತಿ. ಅಣಿಗೆ-ಅಜ್ಞೆ; ಇದು ಬಳಕೆಯಲ್ಲಿಲ್ಲದ ರೂಪ. ಬರ್ದಿದಿರ್-ಬಟ್ದಿದಿರ್, ಬಾಳಿದಿರಿ, ಬದುಕಿದಿರಿ.

೩೯ ಸ್ವಾರಸ್ಯಮಱುತಲ್ಲಿ-ವಿಮರ್ಶೆಮಾಡಲಾಗಿ. ಕಾಷ್ಠಂ-ಸೌದೆಯು ಲಘುವಿನಿಂ-ಲಘುತ್ವದಿಂ, ಹಗುರವಾಗಿದ್ದುದರಿಂದ ನೀರ ಪೊಯ್ಲೊಡನೆ ಪೋಪುದು. ಗಾಂಪನೆನಗೆ-ಬುದ್ಧಿಯಿಲ್ಲದವನಾದ ಎನಗೆ. ತೋರ್ಕೆಗೆ-ಮೇಲುನೋಟಕ್ಕೆ.

೪೦-೪೬ ಸೊಲ್ವಿಡಿದು-ಸೊಲ್ಲಂ ಪಿಡಿದು, ಮೌನವಾಗಿ. ಸರಿಗಜ್ಜ-ಯೋಗ್ಯವಾದ ಕಾರ್ಯ. ಬಗೆ ಮುಂತಱುತು-ಇಷ್ಟವನ್ನು ಮುಂಚಿತವಾಗಿಯೆ ತಿಳುಕೊಂಡು. ಹೂಣೆಯು-ತ್ಸ.ಪ್ರೈಶೂನ್ಯ, ಹೊಟ್ಟೆಯಕಿಚ್ಚು. ಹಸುಗೆ-ಹಂಚಿಗೆ. ಬೇಗುದಿಗುದಿದು-ಬಹಳ ಸಂಕಟಪಟ್ಟು. ಅವನ ತಪ್ಪ ಬಗೆಯೊಳ್ ಅಟ್ಟುಳಿಗೆಯ್ದು-ಹೆಚ್ಚಾಗಿ ಮಥಿಸಿ, ಯೋಚಿಸಿ. ಅಟ್ಟುಳಿ-ಸಂತಾಪ. ನೆಗೞ್ತೆ-ಪ್ರಸಿದ್ಧಿ, ಯಶಸ್ಸು.

೪೮ ನೆರ-ಸಹಾಯ. ಸಚರಾಚರಾತ್ಮಕಂ-ರಾಮನು ; ಹೇಗೆ ?

೫೦-೫೨ ಉಪ್ಪರಂ-(ಅವ್ಯಯ) ಎತ್ತರದಲ್ಲಿ. ಬಟಿವಟಿಯೊಳ್-ಪಕ್ಕಪಕ್ಕದಲ್ಲಿ. ಝಲ್ಲರಿಯ-ಕುಚ್ಚುಗಳುಳ್ಳ. ಸಿರಿಬಲ್ಲಹ-ತ್ಸ.ಶ್ರೀವಲ್ಲಭ, ರಾಮ. ನಾಡರಸಿ-ನಾಡೆಂಬ ಅರಸಿಯು. ಅಂತರದೊಳ್-ನಡುವೆ. ಪೊಸಕುರುಜು-ಇಲ್ಲಿ ಹೊಸ ಫಲವಸ್ತ್ರ. ಚೈತ್ರರಥ-ನಂದನವನ. ಈ ಪದ್ಯಗಳಲ್ಲಿ ರಂಗವಲ್ಲಿ, ಫಲವಸ್ತ್ರಗಳನ್ನು ಉತ್ಪ್ರೇಕ್ಷೆ ಮಾಡಿರುವುದು ಬಹಳ ಸೊಗಸಾಗಿದೆ. ಮೊಗವಾಡ-ಮುಂಭಾಗ.

೫೩-೫೬ ಸುಮುಖದ ಅಣಿ-ಪ್ರಸನ್ನವಾಗಿದ್ದ ಸೇನೆಯು ನಾಡ ಸಿಂಗರಕೆ ಅಚ್ಚರ್ಯಗೊಂಡು, ಸನ್ನೆಯ-(ತ್ಸ.ಸನ್ನಾಹ) ಮೆಸಗಿ, ಕಾದಿರ್ದರ್. ಕಾಡ್ಪೊಟ್ಟೆ-ಕಾಡ ಹೊಳೆ. ಇಱುಂಪೆ-ಇರುವೆ. ಮೊಟಗು-ಗುಡುಗು. ಬೃಂಹಿತ-ಆನೆಯ ಕೂಗು ಅಟ್ತೆ-ಆಸೆ. ಎಣೆಯರು-ಜತೆಗಾರರು.

೫೬-೬೦. ೫೬ ರಲ್ಲಿ ಕ್ರಮಾಲಂಕಾರವಿದೆ. ಎಳೆವಾಸು-ಭೂಶಯ್ಯೆ, ನೆಲದ ಮೇಲೆ ಮಲಗುವಿಕೆ. ನೋಂತ-ವ್ರತಮಾಡಿದ. ಪಾರ್ವಬಳಗಂ-ಬ್ರಾಹ್ಮಣರ ಗುಂಪು. ಅಡಗು-ಮಾಂಸ. ಕಣೆ-ಬಾಣ. ರಾಜನ್ಯನಿವಹಂ-ಕ್ಷತ್ರಿಯರ ಸಮೂಹವು. ಬೇರಿಗರು-ಬೇರಮಾಡುವರು, ವ್ಯಾಪಾರ ಮಾಡುವವರು. ಪಾದಜನಿಚಯ-ಶೂದ್ರರ ಸಮೂಹ; ಹೇಗೆ? ಮೆಲ್ಲೆಲರ್=ಮೆಲ್ಲಿತು+ಎಲರ್, ಮಂದಮಾರುತ. ಮಲಯಜ-ಶ್ರೀಗಂಧ; ಹೇಗೆ? ಭೂದೇವರು-ಬ್ರಾಹ್ಮಣರು. ಅಂದಣ-ಪಲ್ಲಕ್ಕಿ. ಮಾಗಧರ್-ಹೊಗಳುಭಟ್ಟುಗಳು. ಕೆತ್ತುಕೊಂಡಿರಲ್-ನಡುಗಿಸುತ್ತಿರಲು; ಧಾ-ಕೆತ್ತು ಸ್ಪಂದನೇ. ಬವಣಿಯೆಣಿಸಿ-ಅಲೆದಾಟವನ್ನು ನೆನೆದುಕೊಂಡು. ಬವಣಿ-ತ್ಸ.ಭ್ರಮಣ. ಅಣಿಯರಂ-ಇಲ್ಲಿ ಉಚಿತರೀತಿಯಲ್ಲಿ. ಬೆಲೆವಣೆ-ರತ್ನ.

೬೧-೬೩ ಮುಗಿಲಟ್ಟಣೆ- ಮೇಘವೆಂಬ ಅಟ್ಟಣೆ. ಅಚ್ಚರಿಸಿ-ತ್ಸ.ಅಪ್ಸರಸ್ತ್ರೀ. ಸೇಸೆ-ಅಕ್ಷತೆಗಳು. ಎಡ್ಡಂ-ಮನೋಹರವಾಗಿ. ನರಯಾನ-ಪಲ್ಲಕ್ಕಿ. ಭಗಣ-ನಕ್ಷತ್ರಗಳ ಸಾಲು.

೬೪ ಜಘನ್ಯಜರು-ಕೀಳುಜಾತಿಯವರು. ಅಂತ್ಯಜರು-ಹೊಲೆಯರು. ಪಡೆದನಂ-ಹಡೆದವನನ್ನು, ತಂದೆಯನ್ನು. ನೀಟುೆಯರ್-ಸೌಂದರ್ಯವತಿಗಳು. ಅಲರ್ವೊಡೆಯ-ಅಲರಂ ಪೊಡೆಯಲ್ಲಿ ಉಳ್ಳವನು, ಪದ್ಮನಾಭನಾದ ವಿಷ್ಣು. ಗಾಡಿಯಿಂದೆ-ಸೌಂದರ್ಯದೊಡಗೂಡಿ. ಲಕ್ಷ್ಮಿಮನೋಹರಂ+ಒಡನೆ.

## ಐದನೆಯ ಸಂಧಿ

**ಸೂಚನೆ** :—ಮಾರ್ತಾಂಡ ಕುಲಲಲಾಮಂ-ಸೂರ್ಯವಂಶಕ್ಕೆ ತಿಲಕನಾದ. ನಿರ್ಜರರ್-(ಜರೆಯಿಲ್ಲದವರು) ದೇವತೆಗಳು.

೧ ರಘುಪುಂಗವಂ-ಇಲ್ಲಿ ಪುಂಗವ ಶಬ್ದಕ್ಕೆ ಅರ್ಥವೇನು ? ಎಣಿಕೆಯೊಳ್-ದಿನಗಳ ಲೆಕ್ಕದಲ್ಲಿ, ದಿನಗಳನ್ನು ಲೆಕ್ಕಮಾಡುತ್ತ. ಏಗಳುಂ-ಹೊಸಗನ್ನಡ ಯಾವಾಗಲೂ. ತಂಗೆಯಂ-ಇಲ್ಲಿ ತಂಗಿಯಾದ ಕೈಕೆಯನ್ನು. ವಿಧಿಯಂ-ಅದೃಷ್ಟವನ್ನು.

೨ ಬಲ್ನೋಂಪೆಸಗಲ್=ಬಲ್ಲಿತು + ನೋಂಪು, ಬಲ್ನೋಂಪಂ + ಎಸಗಲ್—ಕಠಿನವಾದ ವ್ರತವನ್ನು ಮಾಡಲು. ಮೆಯ್ಯಿದಱೊಳ್-ಈ ಮೆಯ್ಯೊಯ್, ಈ ಜನ್ಮದಲ್ಲಿ; ಇಲ್ಲಿ ಮೆಯ್ ಯಾವ ವಿಭಕ್ತಿಯಲ್ಲಿದೆ ? ವ್ಯಾಕರಣ ವಿಶೇಷವೇನು ? ಎಳಗಂದಿ-ಎಳಗರುವುಳ್ಳ. ಕಣ್ಜಕ್ಕವಕ್ಕಿ ರಾಮಚಂದ್ರನ ಕಂಡು-ಕಣ್ಣೆಂಬ ಚಕ್ರವಾಕಪಕ್ಷಿಯು ರಾಮನೆಂಬ ಚಂದ್ರನನ್ನು; ಇಲ್ಲಿಯ ರೂಪಕದಲ್ಲಿ ಚಮತ್ಕಾರವೇನು ?

೩ ಸುಮುಖ-ದಶರಥನ ಮಂತ್ರಿಗಳಲ್ಲಿ ಒಬ್ಬನು. ಇಂದ್ರಜಾರಿ-ವಾಲಿಗೆ ಶತ್ರು. ಶರಣಾರ್ಥಿತ ಪ್ರದಂ-ಭಕ್ತರ ಇಷ್ಟವನ್ನು ದಯೆಪಾಲಿಸುವವನು. ಇದೆಕೊ= ಇಕ್ಕೊ, ಇಗೊ ಎಂಬ ರೂಪಾಂತರಗಳನ್ನು ಹೊಂದಿವೆ.

೪ ಕಡೆವಗಲ ಮಲ್ಲಿಗೆ- ಮಲ್ಲಿಗೆಹೂವುಗಳು ಸಾಯಂಕಾಲ ಅರಳುತ್ತವೆ. ಪೆಡಮೆಟ್ಟೆ—ಹಿಂಜರಿಯಲು ; ಇಲ್ಲಿ ಪೆಱಗು ಎಂಬುದಕ್ಕೆ ಪೆಡ ಎಂದಾದೇಶ ಬಂದಿದೆ.

೫ ಇದಿರ್ಕಂಡು-ಇಲ್ಲಿ ಮನೆಯಂ ಎಂದು ಅಧ್ಯಾಹಾರ. ಮಣಿಮುಗುಡಗದಿರ್ವಗಲ್-ರತ್ನಖಚಿತವಾದ ಕಿರೀಟದಿಂದ ಪ್ರಸರಿಸಿದ ಕಿರಣಗಳಿಂದುಂಟಾದ ಹಗಲನ್ನು ಕಂಡು ಕಾಂತಿಯಿಂದ ಬೆಳಗುವ ಅಡಿದಾವರೆಗೆ (ಪಾದಗಳೆಂಬ ತಾವರೆಗಳಿಗೆ) ಪುರಡಿ-ಹೊಟ್ಟೆಕಿಚ್ಚುಪಟ್ಟು ದುಂಡುವೊಗಸಸಿ (-ದುಂಡಾಗಿರುವ ಮುಖವೆಂಬ ಚಂದ್ರನು) ಕಂದಿತು ಎನ್ನುವ ಹಾಗೆ ತಾಯಡಿಗೆ ಮಂಡೆಯಂ ಬಾಗಿರ್ದೊಡಂ-ಬಾಗಿರಲು, ಇಂತು-ಹೀಗೆಯೇ ಅಡಿದಾವರೆಗೆ ಪುರಡಿ ಕಣ್ಣೆ ತ್ರದಿಲ್-ಕಣ್ಣೆಂಬ ನೈದಿಲಾ ಕೊರಗೆ ಎನೆ, ಕಣ್ಮಲರ್ ಇಟಿಗೊಂಡು ಬಾಡಿರಲ್— ರಾಮನು ನಮಸ್ಕರಿಸುವಾಗ ಆತನ ತಲೆಯು ಬಾಗಿತು, ಕಣ್ಣುಗಳು ಅರ್ಧ ಮುಕುಳಿತವಾದುವು ಎಂಬುದಕ್ಕೆ ಈ ಪ್ರಕಾರದಲ್ಲಿ ರೂಪಕಗಳ ಮೂಲಕವಾಗಿ ಕಾರಣೋತ್ಪ್ರೇಕ್ಷೆಮಾಡಿರುವುದು ಚಮತ್ಕಾರವಾಗಿದೆ.

೬ ನೂತನಮಂಪೇಳ್ವೆಂ-ನೂತನಂಬೇಳ್ವೆಂ, ಹೊಸ ಸಂಗತಿಯನ್ನು ಹೇಳುವೆನು.

೭ ಅರೆವೆಱೆ-ಅರ್ಧಚಂದ್ರ. ಕರಾಬ್ಜಂ ಗಲ್ಲವೆಂಬ ಅರೆವೆಱೆಯಂ ಸೆಱೆಗೆಯ್ದು ದೇನೌ-(ಏಕೆ ಸೆರೆ ಹಾಕಿತು) ಎಂದರೆ ತಾತ್ಪರ್ಯವೇನು? ಅಕ್ಷಿಯೆಂಬ ಕನ್ನೈದಿಲೆಯು ಪಾದನಖಕಿರಣ ರವಿರುಚಿಯಂ-ಪಾದಗಳ ನಖಕಿರಣಗಳೆಂಬ ಸೂರ್ಯನ ತೇಜಸ್ಸನ್ನು ಪಗೆದು (-ಹೊಟ್ಟೆಕಿಚ್ಚಿನಿಂದ) ಏಂ ಕಾಣ್ಬುದು-ಏತಕ್ಕೆ ನೋಡುತ್ತದೆ, ಎಂದರೇನು ಅರ್ಥ. ಕಂಬುಕಂಧರಂ-ಶಂಖದಂತಿರುವ ಕತ್ತು. ಬಾಹುಬಿಸದಿ-ಕಮಲದ ದಂಟಿನಂತಿರುವ ಬಾಹುವಿನ ಮೇಲೆ. ನಾಸಿಕ..ಸುಯ್ಯ ಸುಪಿನಿಂ-ಓಷ್ಣ್ಯಕ್ಕೆ ಹೂವುಗಳು ಕೊರಗುವುದು ಸಹಜವಲ್ಲವೆ? ಮೂಗು ಅರಳಿ ಮುಗಿಯಿತೆಂದು ಹೇಳುವುದರಲ್ಲಿ ಕವಿಯ ಭಾವವೇನು? ಕುರುಳ್ಗ ಱುಮುಗಿಲ್-ಕುರುಳುಗಳೆಂಬ ಸಣ್ಣ ಮೋಡಗಳು, ನಿಟಿಲಾಂಬರದಿ-ಹಣೆಯೆಂಬ ಆಕಾಶದಲ್ಲಿ ಕೆದರಿರುವುದು ಏಕೆ? ರಾಮನು ನಮಸ್ಕರಿಸಿದಾಗ ಕೈಕೆ ಹೇಗೆ ಇದ್ದಳು ಎಂಬುದನ್ನು ಸಣ್ಣ ಸಣ್ಣ ಆರು ವಾಕ್ಯಗಳಿಂದ ಹೇಳಿ. ಏನೌ-ಏಕಮ್ಮ; ಐ, ಔ ಎಂಬ ಅಯ್ಯ, ಅವ್ವ ಎಂಬುವುಗಳಿಗೆ ಆದೇಶಗಳಾಗಿ ಬರುವ ಪ್ರತ್ಯಯಗಳನ್ನು ಕ್ರಿಯೆಗಳಿಗೆ ಸೇರಿಸುವುದು ವಾಡಿಕೆ; ಉ. ಕೇಳೌ, ಕೇಳ್ಮೆ ಇತ್ಯಾದಿ.

೮ ಬಾಸೆವೆಣ್ಣು-ಸರಸ್ವತಿಯೆಂಬ ಸ್ತ್ರೀಯು, (ಮಾತೆಂಬ ಸ್ತ್ರೀಯು,) ಕತ್ತುರಿಕ್ಕಗ್ಗ ಬಾಯ್ಮನೆಯೊಳಗೆ-ಕಸ್ತೂರಿ ಭರಣಿಯಂತಿರುವ ಬಾಯೆಂಬ ಮನೆಯಲ್ಲಿ (ಇಲ್ಲಿ ಕಸ್ತೂರಿ ಭರಣಿ ಎಂದು ಹೇಳಿರುವುದರಿಂದ ಸುವಾಸನೆಯುಳ್ಳ ಉಸಿರ ಬಿಡುವ ಉತ್ತಮ ಜಾತಿಯ ಸ್ತ್ರೀಯೆಂದು ಹೇಳಿದಂತಾಯಿತು) ಇದ್ದುಕೊಂಡು ದಾಳಿಂಬವಿತ್ತುವಲ್ಗಾಪಿಟ್ಟು—ದಾಳಿಂಬಿಯ ಹಣ್ಣಿನ ಬಿತ್ತುಗಳ ಹಾಗಿರುವ, ಪಲ್-ಹಲ್ಲುಗಳಿಂದ ಕಾಪಿಟ್ಟು-ಕಲ್ಲುಗೋಡೆಯಂತೆ ಹಲ್ಲುಗೋಡೆ ಹಾಕಿ ಯಾರೂ ಒಳಗೆ ಬಾರದಂತೆ ಭದ್ರಪಡಿಸಿಕೊಂಡು, ತೊಂಡೆವಣ್ದುಟಿದೆಱೆಯಂ-ತೊಂಡೆ ಹಣ್ಣಿನಂತೆ ಕೆಂಪಗಿರುವ ತುಟಿಯೆಂಬ ತೆರೆಯನ್ನು ಎತ್ತಲುಂ-ಎಲ್ಲಾ ಕಡೆಗೂ ಬಿಗಿದು-ಹಾಕಿಕೊಂಡು, ಮುತ್ತುಗದಳಿನಾಲಗೆವಣೆಯೊಳ್-ಮುತ್ತುಗದ ತಳಿರಂತೆ ಕೆಂಪಗೆಯೂ ತೆಳ್ಳಗೆಯೂ ಇರುವ ನಾಲಗೆಯೆಂಬ ಮಣೆಯಲ್ಲಿ, ಇದುರ್ಕುಳಿತುಕೊಂಡು, ಏನಂ ಎಸಗಿದಪಳ್-ಏನನ್ನು ಮಾಡುತ್ತಿರುವಳು? ಇನಿಯನ-ಪತಿಯ, (ಬ್ರಹ್ಮನ,) ಆಲೋಕದಿಂದಿತ್ತಲೈತಂದು—ಸಾನ್ನಿಧ್ಯವನ್ನು ಬಿಟ್ಟು ಬಂದು, ನೆಲಸಿರ್ಪುದು-ನೆಲಸಿರಬೇಕೆಂದು, ಏಕಚಿತ್ತದಿಂ-ಏಕಾಗ್ರವಾದ ಮನಸ್ಸಿನಿಂದ ಮೌನಗೊಂಡು ಅಭವನಂ-ಈಶ್ವರನನ್ನು ಧ್ಯಾನಿಪಳೆ? ಅವಳಿಗೆ ಈ

ಮೌನವ್ರತವು ಎನಿತುಪೊೞ್ತು-ಎಷ್ಟು ಹೊತ್ತಿರುವುದು?—ಎಂದರೆ ಒಟ್ಟು ತಾತ್ಪರ್ಯ—ನೀನು ಏಕೆ ಮಾತನಾಡದೆ ಸುಮ್ಮನಿರುವೆ ? ಹೀಗೆ ಎಷ್ಟು ಹೊತ್ತು ಇರುವೆ ?

ಕೈಕೆಯ ಅನ್ಯಾದೃಶವಾದ ಸೌಂದರ್ಯವನ್ನು ಈ ಪದ್ಯದಲ್ಲಿರುವ ಕತ್ತುರಿಕರಂಡಬಾಯ್, ದಾಳಿಂಬವಿತ್ತುವರ್, ತೊಂಡೆವಣ್ದುಟಿದೆೞ್, ಮುತ್ತುಗದಳಿನಾಲಗೆ ಎಂಬುವ ಮತ್ತು ಹಿಂದಣ ಪದ್ಯದಲ್ಲಿರುವ ಕರಾಬ್ಜಂ, ಗಲ್ಲಮೆಂಬರೆವೆೞ್, ಅಕ್ಷಿನೀಲೋತ್ಪಲಂ, ಕಂಬುಕಂಧರಂ, ಬಾಹುಬಿಸ, ನಾಸಿಕಚಂಪಕಮುಕುಳ, ಕುರುೞ್ಗೞುಮುಗಿಲ್, ನಿಟಿಲಾಂಬರ ಎಂಬುವ ಅವಯುವವರ್ಣನೆಗಳಿಂದ ತಿಳಿಸುತ್ತಾಳೆ. ಕವಿಶ್ರೇಷ್ಠರು ಆಯಾ ಅವಯವಗಳನ್ನು ಈ ರೀತಿಯಲ್ಲಿ ವರ್ಣಿಸುವುದು ಸಹಜವಾಗಿದ್ದರೂ ಅವುಗಳನ್ನು ಕೈಕೆಯ ಹೊರಗಣ ಮತ್ತು ಒಳಗಣ ಭಾವವನ್ನು ತಿಳಿಸುವುದಕ್ಕೆ ಪ್ರಕೃತ ಸಂದರ್ಭದಲ್ಲಿ ಉಪಯೋಗಿಸಿಕೊಂಡಿರುವುದು ಈ ಕವಿಯ ಪ್ರತಿಭಾಸಾಮರ್ಥ್ಯವನ್ನು ಚೆನ್ನಾಗಿ ಹೊರಪಡಿಸುತ್ತದೆ. ಪತಿಯೊಡನೆ ಕೋಪಗೊಂಡು ಕೋಣೆಯೊಳಗೆ ಅವಿತುಕೊಂಡು ತನ್ನ ಹಣೆಯ ಬರಹವನ್ನು ನೆನೆನೆನೆದು ಅಭವನನ್ನು ಧ್ಯಾನಿಸುತ್ತ ಮೌನದಿಂದ ಕುಳಿತುಕೊಂಡಿರುವ ಸ್ತ್ರೀಯಂತೆ ಕೈಕೆಯ ವಾಕ್ಕನ್ನು ಉತ್ಪ್ರೇಕ್ಷೆ ಮಾಡಿರುವುದು ಎಷ್ಟು ಚೆನ್ನಾಗಿದೆ ! ಈ ಪದ್ಯದಲ್ಲಿ 'ಮತ್ತು' ಎಂಬುದು ವಾಕ್ಯಾಲಂಕಾರ, ಪ್ರಾಸಿಗೋಸ್ಕರ ಸೇರಿಸಲ್ಪಟ್ಟಿದೆ.

೯ ನಿನ್ನ ಅಣುಗಂ—ಪ್ರಿಯಪುತ್ರನಾದ, ಭರತ—ಭರತನು, ಎಱಗಿದಪಂ-ನಮಸ್ಕರಿಸುತ್ತಿದ್ದಾನೆ, ನೋಡು ನೋಡೌ ಎಂದನ್ವಯ. ರಾಮಂ+ಅಂ+ಅಣತಿಯಂ.

೧೦ ತನಿವೆರ್ಚು=ತನಿತು+ಪೆರ್ಚು, ಬಹಳವಾಗಿ ಉಬ್ಬು ; ಇಲ್ಲಿ 'ತನಿ' ಎಂಬ ಉಪಸರ್ಗಕ್ಕೆ ಆಧಿಕ್ಯವೆಂದರ್ಥ; ಸಮಾನಪ್ರಯೋಗಗಳು—ತನಿಗೆಂಡ, ತನಿವೇಸಗೆ. ಅೞಿಗಣ್-ನಾಶವಾದ ಅಥವಾ ಹಾಳಾದ ಕಣ್ಣು, ಕೆಟ್ಟಕಣ್ಣು.

೧೧ ಕೀೞುಮೇಲು-ಕೇಡು ಶ್ರೇಯಸ್ಸು, ಕೆಟ್ಟದ್ದು ಒಳ್ಳೆಯದು. ಅಭೀಳ-ಭಯಂಕರವಾದ. ಮರಳಿಬರೆ-ಹಿಂದಿರುಗಿ ಬರುವಹಾಗೆ. ಅಟ್ಟಲ್-ದೂತರನ್ನು ಕಳುಹಲು. ಏಳಿಸಿತು-ಧಿಕ್ಕಾರಮಾಡಿತು. ಪುರುಳ್-ಇಲ್ಲಿ ಸಾರ, ಅರ್ಥ, ಪ್ರಯೋಜನ. ಪಿಂಬಾೞುವೆ-ಬಾೞುವೆಯ ಪಿಂದು, ಹಿಂದಿನ ಬಾಳುವಿಕೆ, ಹಿಂದೆ ನಡೆದ ವಿಚಾರ. ದುಮ್ಮಾನ-ಮುಂದೇನು ಕೇಡು ಒದುಗುವುದೊ ಎಂಬ ಭಯ.

೧೨ ಪೂದೋಟದಂತಾಯ್ತು-ಸಂಚಾರಮಾಡುವಲ್ಲಿ ಆನಂದವನ್ನು ಕೊಟ್ಟಿತು ಎಂದು ತಾತ್ಪರ್ಯ. ಈರೇೞ್ಗಾಲಂ=ಎರಡು+ಏಳು+ಕಾಲಂ, ಹದಿನಾಲ್ಕು

ವರ್ಷಗಳು. ಉಪಟಳಂ-ಹಿಂಸೆ, ತೊಂದರೆ. ಪೊಲೆಲ್-ಪಟ್ಟಣ. ಜಟಾಜೂಟನ-ಶಿವನ.

೧೩ ಶತಪತ್ರ-ಕಮಲ. ಬೆಣ್ಣೆಯ್—ಹೊಸಗನ್ನಡದಲ್ಲಿ ಬೆಣ್ಣೆಯೆಂದಾಗಿದೆ. ಅಮಿತ್ರರು-ಶತ್ರುಗಳು.

೧೪ ರಾಘವನ ಸೆಱಗಿಗಿತ್ತೆಂ, ಮಡಲಿಗೆ ಹಾಕಿದೆಂ ಎಂಬುವು ಸಮಾನಾರ್ಥಕಗಳು. ಅವಂ ನಿನಗೆ ನೋವು ಬಾವಿನೊಳ್ ಕಾವ—ರಕ್ಷಕನು.

೧೫ ಕಾಡಿ-ಹಿಂಸಿಸಿ. ಮ್ಮೆವೆ—ರಾಮನ ಹಿಂದೆ ಹೋಗುವುದರಲ್ಲಿ ಉಂಟಾಗುವ ಮಹಿಮೆ. ಅವಳನ್ನು ಕುರಿತು ನೀನು-ಬಾಲೆ, ಬೇಡರಂ....ಬರ್ಪುದು ಬೇಡ, ಕೂಟ್ಮೆಗಂಗಳ್—ಕ್ರೂರ ಮೃಗಗಳು ಇರ್ದಪುವು ಎಂದು ಬೇಡಲು-ಹೇಳಲು, ಒಲ್ಲದೆ ನಂಬಿ ಬಂದವಳಂ-ಬಂದಂಥ ಅವನಿಜೆಯಂ—ಎಂದು ಅನ್ವಯ.

೧೬ ಈಡಿಱಿದ-ಹೆಚ್ಚಾಗಿ ಹಿಂಸೆಕೊಟ್ಟ. ಓವನಿತಂ- ಕಾಪಾಡುವಷ್ಟು. ಪಾವನಿಸಿ= ಪಾವನ+ಇಸು, ಪರಿಶುದ್ಧನನ್ನಾಗಿ ಮಾಡಿ.

೧೭ ಆವನಂ ಮಱೆದೆವು ಒಡನುಣಿಸಿಗೆ—ಲಕ್ಷ್ಮಣನು ಸೀತಾರಾಮರ ಊಟಕ್ಕೆ ಹಣ್ಣು ಹಂಪಲಗಳನ್ನು ನಿತ್ಯದಲ್ಲೂ ತಂದು ಕೊಡುತ್ತಿದ್ದನು. ತಾನು ತಿನ್ನದೆ ನಮಗೆ ಹಣ್ಣು ಹಂಪಲಗಳನ್ನು ತಂದುಕೊಡುವನೇ ಎಂಬ ನಂಬಿಕೆಯಿಂದ ಒಂದು ದಿನವಾದರೂ ನೀನು ನಮ್ಮೊಡನೆ ಕುಳಿತು ಭುಜಿಸೆಂದು ಲಕ್ಷ್ಮಣನನ್ನು ಊಟಕ್ಕೆ ರಾಮನು ಕರೆಯಲಿಲ್ಲ. ಹೀಗೆಯೇ ತಾನು ಮಹಾಶೇಷನ ಅವತಾರವಾದುದರಿಂದ ಹದಿನಾಲ್ಕು ವರ್ಷಕಾಲ ವಾಯ್ವಾಹಾರ ಮಾಡುತ್ತಾ ಲಕ್ಷ್ಮಣನು ಕಳೆದನು. ಹೀಗೆ ಉಪೋಷ್ಯ ಮಾಡಿದ್ದರಿಂದಲೇ ಬ್ರಹ್ಮನಿಂದ ವರವನ್ನು ಪಡೆದ ಇಂದ್ರಜಿತ್ತು ಮೊದಲಾದ ರಾಕ್ಷಸರನ್ನು ಸಂಹರಿಸುವ ಶಕ್ತಿಯು ಲಕ್ಷ್ಮಣನಿಗೆ ಉಂಟಾಯಿತು ಎಂದು ಹೇಳುತ್ತಾರೆ.

೧೮ ನಿರಹಂಕಾರಭಾವ-ಯಾವ ಸೇವೆಯನ್ನೂ ಅದಕ್ಕಾಗಿಯೇ ಮಾಡುವನೇ ಹೊರತು, ಅದರಿಂದ ತನಗೊಂದು ಯಶಸ್ಸಾಗಲಿ, ಪುಣ್ಯವಾಗಲಿ ಬರುತ್ತದೆಂದು ಮಾಡಲಿಲ್ಲ ; ಇದೇ ನಿರಹಂಕಾರ ಭಾವವೆಂಬುದು. ಮುಪ್ಪುರಿಗೊಳಲ್-ಮೂರು ಹುರಿಗಳನ್ನು ಹೊಸೆದಂತಾಗಲು. ಕವಲೊಡೆಯೆ-ಇಲ್ಲಿ ಪ್ರಸರಿಸಲು. ರಿಂಗಣ—"ಕುಣಿಹ."

೧೯ ಮುಗಿದು ಬಟಿಕ ಅರಳಿ ನೋಟ್ಪ. ತೊಡವಿಲಿ=ತೊಡವು (-ಆಭರಣ) ಇಲ್ಲದಿರುವುದು ಆವುದೊ ಅದು ; ಬಹುವ್ರೀಹಿಸಮಾಸದಲ್ಲಿ ಇಲ್ಲ ಎಂಬುದು ಇಲಿ ಎಂದಾಗುತ್ತದೆ. ಕೊಡಂಕೆ-ಕಿವಿ. ನೇರಂ-ನೆಟ್ಟಗೆ. ನೀರ್ಗರಗೊಂಡುದ,ವವಾಗಿ, ಕರಗಿ ನೀರಾಡುವ. ಕುಶಲೆ-ಕೌಸಲೆ..

೨೦ ಈ ಪದ್ಯದಲ್ಲಿ ಕೌಸಲ್ಯೆ ರಾಮರ ಪರಸ್ಪರಾವಲೋಕನದಲ್ಲಿ ಉತ್ಪನ್ನವಾದ ಸಾತ್ವಿಕಭಾವಗಳನ್ನು ಕವಿಯು ವರ್ಣಿಸುತ್ತಾಳೆ.
ಸೆಱೆಗೊರಲ್-ಸೆರೆಬಿಗಿದ ಕೊರಲು, ಸ್ತಂಭಿತವಾದ ಕಣ್ಣೀರುಳ್ಳ ಕತ್ತು. ಎಱೆಮನಂ-ದ್ರವಿಸಿಹೋದ, ನೀರಾಗಿ ಹೋದ ಮನಸ್ಸು. ಬನ್ನದಟಿವು-ಕಷ್ಟಗಳ ನಾಶ, ಶಾಂತಿ. ನಾಡೆ-(ಅವ್ಯಯ) ಹೆಚ್ಚಾಗಿ. ಅನ್ಯೋನ್ಯದರ್ಶನಸುಖಂ ಎಣೆಗಾಣದೆ-ಬೇರೊಂದು ಉಪಮಾನವನ್ನು ಕಾಣದೆ ಎಂದರೆ ಅದಕ್ಕೆ ಅದೇ ಉಪಮಾನವಾಯಿತೇ ಹೊರತು ಬೇರೆ ಉಪಮಾನವು ಇರಲಿಲ್ಲ, "ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ" ಎಂಬಂತೆ.

೨೧-೨೪ ಕಿತ್ತಡಿ-"ಗೊರವಂ", ಋಷಿ. ಕೀಶರ್-ಕಪಿಗಳು. ಪೇರಡವಿ=ಪಿರಿದು+ಅಡವಿ. ಬಟಿಯಂ-ವಂಶವನ್ನು; ಬಟಿ ಎಂಬುದರ ನಾನಾರ್ಥವನ್ನು ಹೇಳಿ. ಪೆಕ್ಕಳಂ-ಹೆಚ್ಚಾಗಿ. ಅಕ್ಕಜ-ಆಶ್ಚರ್ಯ. ಸೈಪು-ಪುಣ್ಯ. ಮಿಡಿಯುಡಿದ-ಹೀಚು ಕಾಯಿಗಳು ಕೂಡ ಬಿದ್ದುಹೋದ. ಕಕ್ಕಸಿ-ತ್ಸ.ಕರ್ಕಶಿ, ಕ್ರೂರಿ. ಮಿೞ್ತು-ತ್ಸ. ಮೃತ್ಯು. ಪೆಣ್ಗಿಚ್ಚಿ-ಹೆಣ್ಣುಕತ್ತೆ. ಅೞ್ತಿ-ಪ್ರೀತಿ. ನೆಗೞ್ತೆ-ಪ್ರಸಿದ್ಧಿ, ಯಶಸ್ಸು.

೨೫ ಒಯ್ಯಾರದ ಮಾತಲ್ಲ-ಜಂಬಕ್ಕೆ ಆಡಿದ ಮಾತಲ್ಲ. ಎಣ್ಮಯ್ಯವಂ-ಅಷ್ಟಮೂರ್ತಿಯಾದ ಶಿವನು ; ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ, ಅಗ್ನಿ ಎಂಬುವುಗಳೇ ಶರೀರವಾಗುಳ್ಳವನು. ಕಯ್ಯಡ್ಡಗಟ್ಟು-ಕೈಯಡ್ಡಗಟ್ಟು; ಇಲ್ಲಿ ಕೈ ಎಂಬುಪಸರ್ಗಕ್ಕೆ ಅರ್ಥವೇನು? ಸಯ್ಯಡಿ-ಅಡಿ ಎನ್ನುವ ಕಡೆ ಸಯ್ಯಡಿ ಎಂಬ ಹೊಸ ರೂಪವನ್ನು ಪ್ರಾಸಿಗೋಸ್ಕರ ಮಾಡಿ ಸೇರಿಸಿದೆ ; ಸಯ್ತು+ಅಡಿ=ಸಯ್ಯಡಿ, ಋಜುವಾದ ಪಾದ : 'ರಯ್ಯ' ಎಂಬ ತದ್ಭವವು ರಮ್ಯ ಶಬ್ದದಿಂದ ಉತ್ಪನ್ನವಾದಂತೆ, 'ಸಯ್ಯ' ಎಂಬುದು ಸೌಮ್ಯ ಶಬ್ದದಿಂದ ಉಂಟಾಗಬಹುದೆಂದು ಯೋಚಿಸಿ, ಸಯ್ಯ+ಅಡಿ=ಸಯ್ಯಡಿ, ಸೌಮ್ಯವಾದ ಪಾದ ಎಂಬ ಹೊಸ ರೂಪವನ್ನು ಕಲ್ಪಿಸಿದಂತೆ ತೋರುತ್ತದೆ.

೨೬-೨೮ ತನುಜನಿನ್ನವಂ-ತನುಜಂ, + ಇಂ-(ಅವ್ಯಯ-ಇನ್ನುಮೇಲೆ), +ಅವಂ. ಅನ್ನೆಯ-ತ್ಸ. ಅನ್ಯಾಯ. ಎನ್ನತು-ಎನ್ನದು, ನನ್ನದು. ನನ್ನಿ ಮಿಗೆ-ಸತ್ಯವು ಮೇಲಾಗಲು, ಪಾದಪೂರಣಕ್ಕಾಗಿಯೂ ಪ್ರಾಸಗಾಗಿಯೂ ಸೇರಿಸಿರುವ ಸ್ವತಂತ್ರವಾಕ್ಯ, (Parenthetical Clause) ಎನ್ನೆನ್ನೆಗಂ-ಯಾವ ಕಾಲಕ್ಕೂ. ನುಡಿಬಿನ್ನಣಕೆ-ಮಾತಿನ ಸೊಗಸಿಗೆ. ನೆಗಪಿ-ಎತ್ತಿ. ಪಾಲು-ವಿಭಾಗ. ಮೇಲ್ಗೆೞೆದು-ಶ್ರೇಷ್ಠವೆನಿಸಿ. ಸನ್ನಹ-ಸನ್ನಾಹ. ಈರೆಳೆ=ಎರಡು+ಎಳೆ (ತ್ಸ.

ಇಳಾ-ಭೂಮಿ), ೧೪ ಲೋಕಗಳು. ಬೆರೆದ ಪಡಿ-ಸೇರಿದ ಹೋಲಿಕೆ. ಇಕ್ಕೆ-ಇರ್ಕೆ, ವಾಸಸ್ಥಾನ.

೨೯ ಬಂತಿದೇರ-ಪಂಙ್ತ್ರರಥ, ದಶರಥ ; ಅವಯುವಾರ್ಥವೇನು ? ಸಂತವಿಡು—ಸಮಾಧಾನಪಡಿಸು. ಪುಳಿನದೊಳ್....ಇತ್ಯಾದಿ—ಈಉಪಮಾನದಿಂದ ಏನು ತಾತ್ಪರ್ಯ ವಿಶೇಷ ದೊರೆಯುತ್ತದೆ. ಅಂಚೆ-ತ್ಸ.ಹಂಸ.

೩೧ ಒಗರ್ಗಾಲಿ-ಸೂರ್ಯನ ರಥಕ್ಕೆ ಒಂದೇಗಾಲಿ ಇದೆ. ಆಟಿದನೊ-ಮುಳುಗಿದನೊ. ಗಾಳಿವಟ್ಟೆ-ವಾಯುಪಥ, ಆಕಾಶ. ತಾರೆಗಳ್-ನಕ್ಷತ್ರಗಳು. ಈ ಪದ್ಯದಲ್ಲಿ ಸೂರ್ಯಾಸ್ತದ ವರ್ಣನೆಯು ಹೃದಯಂಗಮವಾಗಿದೆ.

೩೨ ಭೃಂಗಾಳಿ-ಭೃಂಗಗಳ ಆಳಿ-ಸಮೂಹ. ತಂಗದಿರಂ=ತಣ್ಣಿತು ಕದಿರ್ ಆವಂಗೊ, ಅವಂ : ಚಂದ್ರ. ಅವನೀರುಹಂಗಳ-ವೃಕ್ಷಗಳ. ವಿಹಂಗ-ಹಕ್ಕಿ ; ಅವಯುವಾರ್ಥವನ್ನು ಹೇಳಿ. ಅಬ್ಜಾಂಬಕೀಬೃಂದಂ-ಸ್ತ್ರೀ ಸಮೂಹ. ಅಡ್ಡಂ ಪೋದಂ-ಅಡ್ಡಲಾಗಿ ಹೋದನು, ಮರಸಿಕೊಂಡನು. ಪತಂಗ-ಸೂರ್ಯನು. ಇಲ್ಲಿ ಸಂಜೆಗೆಂಪನ್ನು ಉತ್ಪ್ರೇಕ್ಷಿಸಿದೆ.

೩೪-೩೫ ಬಿಡೌಜ-ಇಂದ್ರ. ಅನೂರು-ಊರು (ತೊಡೆ) ಇಲ್ಲದ ಸೂರ್ಯನ ಸಾರಥಿಯಾದ ಅರುಣನು ನೋಡುವೆನೆನಲು ಕೋಡುಗಲ್ಲಂ-ಶಿಖರವನ್ನು ಸಾರ್ದನು. ೩೪ ಲ್ಲಿ ಕೋಳಿಯ ಕೂಗುವಿಕೆಯನ್ನೂ ೩೫ ಲ್ಲಿ ಅರುಣೋದಯವನ್ನೂ ಚಮತ್ಕಾರವಾಗಿ ವರ್ಣಿಸಿದೆ.

೩೬-೩೭ ಪಗೆಯುವಂ-ಶತ್ರುವಾದವನು ; ಯಾರು ? ಹೇಗೆ ಶತ್ರುವಾಯಿತು ? ಪೂರ್ವಕಥೆಯನ್ನು ಹೇಳಿ. ಕಾಕಾ-ಕಾಪಾಡು, ಕಾಪಾಡು ; ಕಾಕಾ ಎಂಬ ಕೂಗು ಎಂಬ ಎರಡರ್ಥ. ಖಗಕುಲದರಾಯ-ಸೂರ್ಯವಂಶದಲ್ಲಿ ಹುಟ್ಟಿದ ರಾಜ, ರಾಮನು: ರಾಮನು ಸೂರ್ಯಕುಲದ ರಾಜನಾದ ಮಾತ್ರಕ್ಕೆ ಅವನಲ್ಲಿ ಪಕ್ಷಿಗಳ ಅಭಿಮಾನಕ್ಕೆ ಕಾರಣವೇನು ಎಂದರೆ ಅವುಗಳು ಖಗಕುಲದವರು, ಇವನು ಖಗಕುಲದ ರಾಜನಲ್ಲವೇ ? ಖಗಕುಲವೆಂಬುದಕ್ಕೆ ಪಕ್ಷಿಕುಲವೆಂದರ್ಥವಾಗುವುದರಿಂದ, ಶ್ಲೇಷ ಪೂರ್ವಕ ಚಮತ್ಕಾರವಾಗಿ ಉತ್ಪ್ರೇಕ್ಷೆ ಮಾಡಿದೆ. ಬದಿ-ಪಾರ್ಶ್ವ. ೩೭ ರಲ್ಲಿ ಸೂರ್ಯನ ರಥದ ವರ್ಣನೆ ಇದೆ. ಅರ್ಯಮ—ಸೂರ್ಯ.

೩೮-೪೦ ಬದ್ದಣ-ಮಂಗಳವಾದ್ಯ. ಪಡಿಯಿತ್ತು-ಊಟದ ಸಾಮಾನುಗಳನ್ನು ಕೊಟ್ಟು. ನಲವು-ಸಂತೋಷ. ಬಿದುಗಲ್-ಚಂದ್ರಕಾಂತಶಿಲೆ. ಕಡವರ-ಚಿನ್ನ. ಸೂಸಕ-ಗೊಂಚಲು. ಕೆತ್ತಿಗೆಯ-ಕೆತ್ನೆಯ ಕೆಲಸಮಾಡಿರುವ. ಪಡಿ-ಬಾಗಿಲು. ಧಾತು—ಧೈರ್ಯ ; ರತ್ನ, ಹವಳ, ವಜ್ರ ಮುಂತಾದ ನಾನಾಬಣ್ಣದ ಕಲ್ಲುಗಳು : ಇಲ್ಲಿ ಶಬ್ದ ಶ್ಲೇಷ ಮೂಲಕವಾಗಿ ಮಾಡಿರುವ ಚಮತ್ಕಾರವೇನು ?

೪೧ ಅಷ್ಟದಿಕ್ಪಾಲಕರು-ತಂತಮ್ಮ ಪತ್ನಿಯರೊಡನೆ ಬಂದುದಕ್ಕೆ ಕಾರಣವೇನು ?

೪೨-೪ ಚಾವಡಿ-ಆಸ್ಥಾನ, ಒಡ್ಡೋಲಗ. ಬಾಡಬರು-ಬ್ರಾಹ್ಮಣರು. ಪ್ರವಾಸಿಕರು-ಇತರ ಕಡೆಯವರು, ಹೊರಗಣವರು. ಜೋಸೆಯರು-ಯೋಷೆಯರು, ಹೆಂಗಸರು.

೪೫-೫೨ ಇಂಬಿಲ್ಲ-ಜಾಗ ಸಾಲದು. ಒಂಬತ್ತು ಗ್ರಹಗಳು ಏಕರಾಶಿಯಲ್ಲಿ ಪಟ್ಟಾಭಿಷೇಕ ಸುಮುಹೂರ್ತದಲ್ಲಿ ಸೇರಿರಲು ಯಾವ ಕಾರಣವನ್ನು ಕವಿಯು ಊಹಿಸಿದ್ದಾಳೆ ? ಸೌಸವ-ವಾಸನೆ. ದೇಸೆ-ಸೊಗಸು. ನಿಸದಂ-ನಿಶ್ಚಯ. ಪಸದನಂ-ತ್ಸ. ಪ್ರಸಾಧನ, ಅಲಂಕಾರ. ಪರಿವಿಡಿ-ಸಾಲು. ಕಿರಣಮಾಲಿ-ಸೂರ್ಯ. ಕೈದು-ಕತ್ತಿ. ಮೈಸಿರಿ-ದೇಹದ ಶ್ರೀ, ದೇಹಕಾಂತಿ. ಪಡಿ-ಸದೃಶ, ಹೋಲಿಕೆ. ಮಣಿವಚ್ಚ-ರತ್ನಮಯವಾದ ಪಚ್ಚ-ಆಭರಣ. ಕಣ್ಗೊಟ್ಟು-ದರ್ಶನಕೊಟ್ಟು; ಕವಿಯಿಂದ ಮಾಡಲ್ಪಟ್ಟ ಒಂದು ಹೊಸಧಾತು. ರೋಹಿಣಿ-ಈ ನಕ್ಷತ್ರವನ್ನು ಚಂದ್ರನ ಮಹಿಷಿಯೆಂದು ವರ್ಣಿಸುವ ವಾಡಿಕೆ ಉಂಟು. ಒಗ್ಗಿ-ಗುಂಪುಕೂಡಿ.

೫೩ ಆಸಿದು-ಹಸಿದು ಅಥವಾ ಚಲಿಸಿ ಎಂದರ್ಥ ಮಾಡಬೇಕು. ಆದರೆ ಅಸಿ ಎಂಬ ಧಾತುವನ್ನು ಧಾತುಪಾಠದಲ್ಲಿ ಕೊಟ್ಟಿಲ್ಲ. ಅಸಿದು-ಹಸಿದು ಎಂಬುದರ ರೂಪಾಂತರವೆನ್ನುವ ಎಂದರೆ ಅಕಾರಕ್ಕೆ ಹಕಾರಾದೇಶ ಹೇಳಿದೆಯೇ ಹೊರತು ಹಕಾರಕ್ಕೆ ಅಕಾರದ ಆದೇಶವನ್ನು ಎಲ್ಲಿಯೂ ಹೇಳಿಲ್ಲ. ಅಸಿ ಎಂಬುದಕ್ಕೆ ಚಲಿಸು ಎಂಬುದೊಂದು ಅರ್ಥವುಂಟೆಂದು ಕಿಟಲ್ರವರ ಡಿಕ್ಷನರಿಯಲ್ಲಿ ಹೇಳಿದೆ. " ನಿತಾಂತ ಪಸಿದುಣ್ಬುದೆನೆ " ಎಂದು ತಿದ್ದಿದಿರೆ ಸುಲಭವಾಗುತ್ತದೆ.

೫೪-೫೮ ಸೂಟಿಯಿತು-ಕ್ರಮವರಿತು, ಸಕ್ರಮವಾಗಿ. ಸ್ರಜ-ಮಾಲಿಕೆ. ೫೫ ಅತಿಶಯೋಕ್ತ್ಯಲಂಕಾರಕ್ಕೆ ಉದಾಹರಣೆ. ಕಚ್ಛಪಂ-ಆಮೆ. ಅಗ್ಗಿಮೊಗರ-ದೇವತೆಗಳ ಪಸಿವು ಅಡಗಿದುದು-ಏತಕ್ಕೋಸ್ಕರ ? ಎಳೆವೆಣ್ಣ-ಭೂನಾರಿಯು. ಆದಂ-(ಅವ್ಯಯ) ವಿಶೇಷವಾಗಿ. ಧರ್ಮರಾಜ-ಯಮನು.

೫೯ ಬಾಸಿಗವನ್ನು ಇಂದ್ರನೂ, ಕುಂಡಲವನ್ನು ಶೇಷನೂ, ಮುತ್ತಿನ ಹಾರವನ್ನು ....ಇತ್ಯಾದಿಗಳನ್ನು ಇತ್ಯಾದಿಗಳವರು ತಂದರೆಂದು ಹೇಳಿದುದರಲ್ಲಿ ಏನು ಸ್ವಾರಸ್ಯವಿದೆ ?

೬೦ ಬಂಧುರ-ಮನೋಹರವಾದ. ಘನಸಾರ-ಪಚ್ಚಕರ್ಪೂರ. ಅಣ್ಪು-ತೇದ ಗಂಧ. ಯಶೋರಶ್ಮಿಯಿಂ—ಯಶಸ್ಸನ್ನು ಬಿಳುಪಾಗಿ ವರ್ಣಿಸುವುದು ಕವಿಗಳ ಕ್ಲಿಪ್ತ ಸಂಕೇತ ; ರಾಮನ ಕೀರ್ತಿಯು ಸರ್ವತ್ರವ್ಯಾಪಿಸಲು ದಿಗ್ನಾರಿಯರಿಗೆ ಗಂಧ

ಸವರಿದ ಹಾಗೆಯೂ, ದಿಗ್ಗಜಗಳ ಹಣೆಗಳಿಗೆ ಮೊಗವಾಡದ ಹಾಗೆಯೂ ಆಯಿತೆಂದು ವರ್ಣಿಸಿದೆ. ವಾರ-ಸಮೂಹ. ಈ ಪದ್ಯಕ್ಕೆ ತಾತ್ಪರ್ಯವೇನು?

೬೧ ವಿರೋಧಾಭಾಸಾಲಂಕಾರಕ್ಕೆ ಇದು ಉದಾಹರಣೆ.

ಪೂರ್ವಾರ್ಧ :—ಪರ..ಶರಧಿ—ಪರ ಮರಣ-ಇತರರ ಮರಣವನ್ನು ಅಪೇಕ್ಷಿಸುವವನು ಕೃಪಾಸಮುದ್ರನಾಗಿರುವನು ಎಂದರೆ ವಿರೋಧಾರ್ಥ; ದುಷ್ಟರ ಸಂಹಾರಕ್ಕಾಗಿ ಪರಮ ರಣ-ಮಹತ್ತಾದ ರಣವನ್ನು ಅಪೇಕ್ಷಿಸಿದ ರಾಮನು ಆಶ್ರಿತರ ವಿಷಯದಲ್ಲಿ ಕೃಪಾಸಮುದ್ರನಾಗಿರುವುದು ಸಹಜ ಹೀಗಿರಲು ವಿರೋಧವಾಗಿ ಕಂಡು ಬರುವ ಅರ್ಥವು ಸಮಂಜಸವಾಯಿತು. ಭವದೂರ-ಭವನಿಗೆ ದೂರನಾದವನು, ಭವಪ್ರಿಯ-ಭವನಿಗೆ ಪ್ರಿಯನಾಗಿರುವನು, ಎಂದರೆ ವಿರೋಧ; ಭವದೂರ-ಜನ್ಮವಿಲ್ಲದವನು, ಭವಪ್ರಿಯ-ಶಿವನಿಗೆ ಪ್ರಿಯನು ಎಂದರೆ ವಿರೋಧಪರಿಹಾರ. ನೃಶಂಸನು (-ಕ್ರೂರನು) + ಅಪಾತ್ರನು (-ಅಯೋಗ್ಯನು) ಆದವನು, ಎಂದು ಪದವಿಭಾಗಮಾಡಿ ಸುಜನವತ್ಸಲನು, ಜಗತ್ಪೂಜ್ಯನು ಎಂದು ಹೇಳಿದರೆ ವಿರೋಧಾರ್ಥ; ನೃ ಶಂಸನ ಪಾತ್ರನಾಗಿಯುಂ—ನೃ ಮನುಜರ, ಶಂಸನ-ಸ್ತೋತ್ರಕ್ಕೆ ಪಾತ್ರನಾಗಿಯುಂ ಅರ್ಹನಾಗಿಯೂ, ಸುಜನವತ್ಸಲನೂ ಜಗತ್ಪೂಜ್ಯನೂ ಆಗಿರುವನು ಎಂದರೆ ವಿರೋಧ ಪರಿಹಾರ.

ಉತ್ತರಾರ್ಧ :—ಅರಸಂ-ರಸವಿಲ್ಲದವನು, ಸದಾವಿನುತನು-ಸತ್ಪುರುಷರಿಂದ ಅವಿನುತನು-ಸ್ತೋತ್ರ ಮಾಡಲ್ಪಡದವನು, ಎಂದರೆ ನಿಂದ್ಯನು, ಅಕಲಂಕಾ ಪ್ರಥಿತಂ—ಅಕಲಂಕ-ದೋಷರಹಿತನೆಂದು ಪ್ರಸಿದ್ಧಿ ಪಡೆಯದ ಎಂದರೆ ದೋಷಿಯೆಂದು ಹೆಸರು ಪಡೆದವನು, (ಅಱಿಯಲ್ಕೆ—ಯೋಚಿಸಿದರೆ), ಕುರೂಪಾತ್ತವಿಗ್ರಹನುಂ—ಕುರೂಪ-ನಿಂದ್ಯವಾದ ರೂಪವನ್ನು ಆತ್ತ-ಧರಿಸಿದ ವಿಗ್ರಹನುಂ-ಶರೀರವುಳ್ಳವನು ಎಂದರೆ ವಿಕಾರವಾದ ಮೈಯುಳ್ಳವನು—ಈ ಪ್ರಕಾರವಿರುವವನು ಸರಸೋದಯಂ-ರಸದ ಅವಿರ್ಭಾವದಿಂದ ಕೂಡಿಯೂ, ನಿಷ್ಕಲಂಕಂ-ದೋಷರಹಿತನಾಗಿಯೂ ಆಗಿ, ತ್ರಿಲೋಕಾಭಿರಾಮನೆನಿಸಿ-ಮೂರು ಲೋಕದಲ್ಲಿ ಅಭಿರಾಮನು-ಸುಂದರನೂ ಆಗಿ ಎಸೆದಂ ಎಂದರೆ ವಿರೋಧಾರ್ಥ ಕಾಣುತ್ತದೆ. ಅರಸಂ-ರಾಜನು, ಸದಾ—ಸರ್ವ ಕಾಲದಲ್ಲಿಯೂ ವಿನುತನಾಗಿಯೂ, ನಾಕಲಂಕಾಪ್ರಥಿತಂ—ಪಾತಾಳಲಂಕೆಯಲ್ಲಿ ಪ್ರಸಿದ್ಧನಾಗಿಯೂ ಕುರೂಪಾತ್ತವಿಗ್ರಹಂ—ಕು-ಭೂಮಿಯಲ್ಲಿ, ರೂಪಾತ್ತವಿಗ್ರಹಂ-ಅವತರಿಸಿದವನು ಆಗಿಯೂ ಇರುವ ರಾಮನು ಸರಸೋದಯಂ-ಸರಸವಾದ ಅವತಾರವುಳ್ಳ

ವನು, ನಿಷ್ಕಲಂಕಂ-ಪರಿಶುದ್ಧನು, ತ್ರಿಲೋಕಾಭಿರಾಮನು ಎಂದು ಅರ್ಥಮಾಡಿದರೆ ವಿರೋಧ ಪರಿಹಾರವಾಗುತ್ತದೆ.

೬೨ ಈ ಪದ್ಯಕ್ಕೆ ರಾಮಪರವಾಗಿಯೂ ಶಿವಪರವಾಗಿಯೂ ಅರ್ಥವಾಗುತ್ತದೆ. ಹೀಗೆ ಶ್ಲೇಷಗರ್ಭವಾಗಿ ಉಭಯತ್ರ ಅರ್ಥವಾಗುವಂತೆ ಪದ್ಯವನ್ನು ಮಾಡಿ ತಾನು ನಂಬಿರುವ ಹರಿಹರಾಭೇದವನ್ನು "ಶಿವನೊಳಂ ತನ್ನೊಳಂ ಭೇದವೇಂ ತಿಲಮಾತ್ರಮಿಲ್ಲ" ಎಂದು ಇಲ್ಲಿ ಕವಿಯು ಸ್ಪಷ್ಟವಾಗಿ ತಿಳಿಸುತ್ತಾಳೆ. ಕೆಳಗಣ ಟೀಕೆಯಲ್ಲಿ (೧) ಎಂಬುದು ಶಿವಪರದಲ್ಲಿಯೂ (೨) ಎಂಬುದು ರಾಮಪರದಲ್ಲಿಯೂ ಅರ್ಥಯೋಜನೆ.

೧ ತಲೆಯೊಳ್....ನಾಳ್ದಮರೆ—ತಲೆಯೊಳ್ ನವಿರ್ಗಳ-ಕೂದಲುಗಳೆಂಬ ಅಗಸಂ-ಆಕಾಶವು. ಚಲಿತ....ಮರೆ-(ಶಿವನು ವ್ಯೋಮಕೇಶನಾದುದರಿಂದ) ಚಲಿಸಲ್ಪಟ್ಟ ದುಂಬಿಗಳ ಶೋಭೆಯನ್ನು ಹೊಂದಿ ಚೆನ್ನಾಗಿರಲು; ಕಂಬು.... ಶೋಭೆ ನಿಮಿರೆ—ಕಂಬುಗಳ-ಶಂಖದಂತೆ ಲಕ್ಷಣವಾದ ಕತ್ತು, ಹೊಳೆ-(ತಲೆಯಲ್ಲಿರುವ) ಗಂಗಾನದಿಯು, ಅರಮೆಯ್-(ಅರ್ಧನಾರೀಶ್ವರನಾದ ಶಿವನ) ಅರ್ಧದೇಹ, ಇಂಗಳನಯನ ಮೆಸೆವ ಫಾಲ-ಅಗ್ನಿನೇತ್ರದಿಂದ ಕೂಡಿ ಶೋಭೆವೆತ್ತಿರುವ ಹಣೆ, ಮತ್ತು ಧೃತಪುನ್ನಾಗ-ಧರಿಸಲ್ಪಟ್ಟ ನಾಗಶ್ರೇಷ್ಠಗಳು ಇವುಗಳ ಶೋಭೆ-ಕಾಂತಿಯು ನಿಮಿರೆ-ಪ್ರಸರಿಸಲು; ಕೆಲದಲ್ಲಿ ಅಚಲಾತ್ಮಭವೆ ಪಾರ್ವತಿಯು ಇರಲು; ರಾಜಮೌಳಿಯು—ಚಂದ್ರಶೇಖರನಾದ ಶಿವನು ಎಂದು ಅರ್ಥವಾಗುತ್ತದೆ. ಕಂಬುಗಳದ ಶೋಭೆ, ಹೊಳೆಯ ಶೋಭೆ, ಅರಮೆಯ್ಯ ಶೋಭೆ, ಇಂಗಳನಯನಮೆಸೆವ ಫಾಲದ ಶೋಭೆ, ಧೃತ ಪುನ್ನಾಗದ ಶೋಭೆ ಎಂದು ಹೇಳಬೇಕಾಗಿರುವ ಕಡೆಯಲ್ಲಿ ಕಂಬುಗಳ ಇತ್ಯಾದಿ ನಾಮಪದಗಳನ್ನು ಸಾಲಾಗಿ ಬರೆದು ಕೊನೆಯದಾದ ಧೃತಪುನ್ನಾಗ ಎಂಬ ಪದಕ್ಕೆ ಮಾತ್ರ ಶೋಭೆ ಎಂಬುದನ್ನು ಸೇರಿಸಿರುವುದು ತಪ್ಪೆಂದು ತೋರಿದರೂ ಈ ರೀತಿ ಷಟ್ಪದಿಗಳಲ್ಲಿ ವಾಡಿಕೆಯಾಗಿ ಪ್ರಯೋಗಿಸುವುದುಂಟು. ಪ್ರಥಮೆಯನ್ನು ಸರ್ವ ವಿಭಕ್ತಿಗೂ ಬದಲಾಗಿ ಪ್ರಯೋಗಿಸಬಹುದೆಂಬ ವ್ಯಾಕರಣ ಸೂತ್ರದ ಆಧಾರದಮೇಲೆ ಇಂಥ ಪ್ರಯೋಗವನ್ನು ಶುದ್ಧವೆಂದು ನಿರೂಪಿಸಲಾಗುತ್ತದೆ.

೨ ರಾಮಪರದಲ್ಲಿ ಅರ್ಥಯೋಜನೆ:—ತಲೆಯೊಳ್ ನವಿರ್ಗಳ್-ಕೂದಲುಗಳು, ಅಗ-ಪಟ್ಟಾಭಿಷೇಕ ಕಾಲದಲ್ಲಿ, ಸಂಚಲಿತ....ಮರೆ—ಶಿರಸ್ಸಿನ ಮೇಲೆ ತೀರ್ಥಗಳನ್ನು ಅಭಿಷೇಕ ಮಾಡಲಾಗಿ ಕೂದಲುಗಳು ಕೆದರಿಹೋಗಲಾಗಿ ಸಂಚಲಿತ ಭ್ರಮರಗಳಂತೆ ಕಂಗೊಳಿಸಲು; ಕಂಬುಗಳ-ಶಂಖದಂತೆ ತ್ರಿರೇಖೆಗಳಿಂದ ಶೋಭಿತವಾದ ಕಂಠದ, ಹೊಳರಮ್ಮೆಯ್ಯಿಂಗಳ-(ಅರ್ಥವಾಗುವುದಿಲ್ಲ)

ನಯನವೆಸೆವ ಫಾಲದ, ಧೃತಪುನ್ನಾಗನ-(ಭಗವಂತನು ಪುರುಷಶ್ರೇಷ್ಠ ನಾದ ರಾಮನಾಗಿ ಅವತಾರಮಾಡಿದ್ದರಿಂದ) ಧರಿಸಿದ ಮಹಾಪುರುಷನ ಶೋಭೆ ನಿಮಿರೆ ; ಕೆಲದೊಳ್ ಅಚಲಾತ್ಮಭವೆ-ಸೀತೆಯು ಇರಲು, ರಾಜಮೌಳಿ-ರಾಜಶ್ರೇಷ್ಠನಾದ ರಾಮನು ಎಂದರ್ಥ. ಬಿರುದನುಂ=ಬಿರುದಂ+ಉಂ, ಬಿರುದನ್ನೂ; ಹೀಗೆ ದ್ವಿತೀಯಾವಿಭಕ್ತಿ ಪ್ರತ್ಯಯವಾದ 'ಅಂ' ಎಂಬುದರ ಮುಂದೆ 'ಉಂ' ಎಂಬ ಸಮುಚ್ಚಯಾರ್ಥದ ಪ್ರತ್ಯಯವನ್ನು ಸೇರಿಸುವುದು ವ್ಯಾಕರಣದ ಪ್ರಕಾರ ತಪ್ಪು, 'ಉಂ' ಎಂಬುದನ್ನು ಸೇರಿಸಿ ಆಮೇಲೆ 'ಅಂ' ಎಂಬುದನ್ನು ಸೇರಿಸಬೇಕು, (ಶ. ದ. ಸೂ 122 b) ಹಾಗೆ ಮಾಡಿದರೆ ಬಿರುದುಮಂ ಎಂದಾಗಬೇಕು.

೬೩ ಕಣ್ಗಳ ಮಲಂ-ಕಣ್ಗಳ ದೋಷ, ಇಲ್ಲಿ ಒಳಗಣ್ಣಿನ ದೋಷ ಎಂದರೆ ಅಜ್ಞಾನವು. ಜನಪದದ ಮನ್ನೆಯರ್ ಕಾಣ್ಕೆಯಂ (-ಕಾಣಿಕೆಯನ್ನು) ನೀಡಿದರ್, ನಮಿಸಿ ಸಂತಸದೊಳ್ ಉಕ್ಕರ್ಾಡಿದರ್ (-ಉಬ್ಬಿಕುಣಿದರು) ಎಂದನ್ವಯ.

೬೪ ಒಂದಂ-"ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶ್ರುತಿಯ ಪ್ರಕಾರ ಏಕವಾದ ಬ್ರಹ್ಮವನ್ನು, ಎಂದರೆ ಬ್ರಹ್ಮೈಕ್ಯವನ್ನು ಎಡೆಗೆಯ್ದು-ಆಶ್ರಯಿಸಿ ನಂಬಿ; ಎರಡು ಭಾವಮಂ-ಜೀವಾತ್ಮ ಪರಮಾತ್ಮ ರೂಪವಾದ ಆ ಬ್ರಹ್ಮದ ಎರಡು ಸ್ವರೂಪವನ್ನು ತೊಱೆದು-ತ್ಯಜಿಸಿ, ಎಂದರೆ ಭ್ರಮೆಯೆಂದು ತಿಳಿದು; ಮೂಱಿಂದದಿಂ ಪದೆದು ಆಬ್ರಹ್ಮವೊಂದೇ ಬ್ರಹ್ಮ ವಿಷ್ಣು ರುದ್ರರುಗಳು ಎಂಬ ಮೂರು ರೂಪಗಳಲ್ಲಿ ಇರುತ್ತದೆಂದು ಪದೆದು-(ಇಷ್ಟಪಟ್ಟು) ತಿಳಿದು ; ನಾಲ್ಕಱೊಳ್-ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಿಧವಾದ ಪುರುಷಾರ್ಥಗಳಲ್ಲಿ ಐದನಳವಡಿಸಿ-(ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮಗಳೆಂಬ) ಪಂಚೇಂದ್ರಿಯಗಳನ್ನು ಸೇರಿಸಿ, ಎಂದರೆ ಈ ನಾಲ್ಕು ವಿಧವಾದ ಪುರುಷಾರ್ಥಗಳ ಸಂಪಾದನೆಯಲ್ಲಿಯೇ ಇಂದ್ರಿಯಗಳ ವ್ಯಾಪಾರವನ್ನು ಕಟ್ಟುಮಾಡಿ ನಿಲ್ಲಿಸಿ ; ಆಱನೊದೆದು-(ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ) ಅರಿಷಡ್ವರ್ಗಗಳನ್ನು ಜಯಿಸಿ ; ಏೞನು ಸದೆದು-ಸಪ್ತವ್ಯಸನಗಳನ್ನು (ಎಂದರೆ ಬೇಟೆ, ಜೂಜು, ಸ್ತ್ರೀಮೋಹ, ಕುಡಿ, ನಾಟ್ಯ, ದಿವಾಸ್ವಾಪ, ವ್ಯರ್ಥಾಟನಗಳೆಂಬ) ಏಳು ದುರ್ವ್ಯಾಪಾರಗಳನ್ನು ಹೊಡೆದು-ಬಿಟ್ಟು ; ಎಂಟುಮನಿಕ್ಕಿ-(ಅನ್ನ, ಅರ್ಥ, ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ ಎಂಬಿವುಗಳ ಸಂಪತ್ತಿನಿಂದ ಉಂಟಾಗುವ) ಎಂಟು ಬಗೆಯ ಮದಗಳನ್ನು (ಕೆಚ್ಚನ್ನು) ಇಕ್ಕಿ-ಹೊಡೆದು, ದೂರೀಕರಿಸಿ; ಹೃದಯಮಮ್ಬರದೊಳ್-ಹೃದಯದ ಅಂತರಂಗ-ಒಳಭಾಗವೆಂಬ ಅಂಬರದೊಳ್-ಆಕಾ

ಶದಲ್ಲಿ, ಬಿಂದುರೂಪಮಂ-ಬಿಂದುಸ್ವರೂಪವಾದ ಪರಮಾತ್ಮನನ್ನು ನಿಂದಿರಿಸಿ-ನಿಲ್ಲಿಸಿ ಎಂದರೆ ಧ್ಯಾನಿಸಿ, ಒಲಿಲ್ದು-ಪ್ರೀತಿಸಿ, ಒಂಭತ್ತುಬಿಂದೆಱಗಿ (ಶಂಖಚಕ್ರದ್ವಾದಶೋರ್ಧ್ವಪುಂಡ್ರಧಾರಣ, ಹರಿಯ ಸ್ಮರಣ, ಸ್ವಾಮಿಯ ನಾಮ ಸಂಕೀರ್ತನ, ಸ್ವಾಮಿಯ ಪಾದತೀರ್ಥವನ್ನು ತೆಗೆದುಕೊಳ್ಳುವಿಕೆ, ಸ್ವಾಮಿಗೆ ನೈವೇದ್ಯಮಾಡಿದ ಪ್ರಸಾದವನ್ನು ಭೋಜನಮಾಡುವಿಕೆ, ಏಕಾದಶೀದಿವಸದಲ್ಲಿ ಉಪವಾಸಮಾಡುವಿಕೆ, ಸ್ವಾಮಿಗೆ ತುಲಸೀದಳದಿಂದ ಪೂಜೆಮಾಡುವಿಕೆ, ಸ್ವಾಮಿಯ ಭಕ್ತರಿಗೆ ಭೋಜನ ಮಾಡಿಸುವಿಕೆ ಎಂಬೀ ಪ್ರಕಾರವಾದ) ಒಂಭತ್ತು ತೆರದ ಭಕ್ತಿಯಿಂದ ಎಱಗಿ-ಸೇವೆಮಾಡಿ ; ಅನಂತಚಿತ್ಪ್ರಭನಂ-ಅಪರ್ಯಾಪ್ತವಾದ (·ಎಲ್ಲೆಯಿಲ್ಲದ) ಜ್ಞಾನಜ್ಯೋತಿಯಾದ ಭಗವಂತನನ್ನು, ಅಮಂದಾನಂದದಿಂದೊಂದಿದ-ಅತ್ಯಧಿಕವಾದ ಆನಂದದಿಂದ ಕೂಡಿದ, ಅಮಲಗುಣಸಾಂದ್ರರ್-ಒಳ್ಳೆಯಗುಣಗಳಿಂದ ಪರಿಪೂರ್ಣರಾದ ಮುನೀಂದ್ರರು ಇಂತು-ಕೆಳಗೆ ಹೇಳುವ ರೀತಿಯಲ್ಲಿ ನುತಿಸಿದರ್-ಸ್ತೋತ್ರಮಾಡಿದರು.

ಈ ಪದ್ಯದಲ್ಲಿ ಬಿಂದು (ಸೊನ್ನೆ), ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು ಎಂಬ ಅಂಕಗಳು ಬಂದಿವೆ. ಇದೊಂದು ವಿಧವಾದ ಶಬ್ದಚಿತ್ರ.

೭೫-೭೬ ಜಗತ್ಕಾರಣನಾದ ಭಗವಂತನನ್ನು ನಿರೂಪಿಸುವ ವಿಶೇಷಣಗಳನ್ನು ರಾಮನಿಗೆ ಕೊಟ್ಟಿರುವುದರಿಂದ ರಾಮನು ಜಗತ್ಕಾರಣನಾದ ಹರಿಯ ಅವತಾರವೆಂದು ಹೇಳಿದಂತಾಯಿತು. ನಿರಂಜನ-ಪಾಪರಹಿತನೇ, ಪರಮಹಂಸ-ಹಂಸಸ್ವರೂಪಿಯಾದ ಭಗವಂತನೇ, ವಿಶ್ವ..ಹೇತು-ಪ್ರಪಂಚವಿಸ್ತಾರಕ್ಕೆ ಮೂಲಕಾರಣನೇ, ಕೈವಲ್ಯಲಕ್ಷ್ಮೀರಮಣ-ಮೋಕ್ಷವೆಂಬ ಸ್ತ್ರೀಗೆ ಪತಿಯಾದವನೇ, ಸತ್‌ಸ್ವರೂಪ-ಸದಾತ್ಮಕನೇ, ತತ್ವಾತೀತ-ಪೃಥಿವ್ಯಾದಿ ೨೫ ತತ್ವಗಳಿಗಿಂತ ಬೇರಾದವನೇ, ಧಾತ-ಸೃಷ್ಟಿಕರ್ತನೇ, ಅತನುಭೂರಿಲೀಲ-ಮಹತ್ತಾಗಿಯೂ, ಅನೇಕವಾಗಿಯೂ ಇರುವ ನಿನಗೆ ಲೀಲಾರೂಪವಾಗಿಯೂ ಇರುವ ಲೋಕ ವ್ಯಾಪಾರಗಳನ್ನು ನಡೆಸುವವನೇ, ಶರಣಾಗು.

ಅನಾದ್ಯ-ಆದಿಯಿಲ್ಲದವನೇ. ನಿಶ್ಚಿಂತ್ಯ-ಚಿಂತೆಗೆ ಅಗೋಚರನಾದವನೇ, ಧ್ಯಾನಕ್ಕೆ ಸಿಕ್ಕದವನೇ. ಚಿದ್ಘನ-ಜ್ಞಾನಘನಿ ಎಂದರೆ ಜ್ಞಾನಸ್ವರೂಪನೇ. ಚರಾಚರದ ಚೈತನ್ಯಾತ್ಮ-ಸ್ಥಾವರ ಜಂಗಮರೂಪದಲ್ಲಿರುವ ಸಮಸ್ತ ಜೀವರುಗಳಿಗೆ ಚೈತನ್ಯಸ್ವರೂಪನಾದವನೇ ಎಂದರೆ ಅವುಗಳ ಸತ್ತೆಯನ್ನು ಧರಿಸಿಕೊಂಡಿರುವವನೇ ಎಂದರೆ ಅವನು ಎಲ್ಲಕ್ಕೂ ಅಂತರ್ಯಾಮಿಯಾಗಿದ್ದು

ಅವುಗಳನ್ನು ಧರಿಸಿಕೊಂಡಿರುವುದರಿಂದ ಅವುಗಳು ಉಳಿದಿವೆ ಎಂದು ಹೇಳು ವ ಭಾವ. ಓಂ-ಓಂ ಶಬ್ದಪ್ರತಿಪಾದ್ಯನೇ, ಪರಾತ್ಪರ-ಪರಕ್ಕೆ ಪರವಾದವನೇ, ಸರ್ವಸ್ಮಾತ್ಪರನೇ ; ಎಲ್ಲಕ್ಕಿಂತಲೂ ಇವನು ಪರನು-ಮೇಲಾದವನು, ಇವ ನಿಗೆ ಮೇಲಾದವನು ಒಬ್ಬನೂ ಇಲ್ಲವೆಂದು ಅರ್ಥ. ನಿರ್ಗುಣ-ಗುಣರಹಿತ ನಾದವನೇ ಎಂದರೆ ಇವನಲ್ಲಿ ಸುಗುಣ ದುರ್ಗುಣಗಳೊಂದೂ ಇಲ್ಲವೆಂ ದರ್ಥ. ನಿಸ್ತುಲಾಂಗ-ಅಸದೃಶವಾದ ಶರೀರ ಪರಿಗ್ರಹಮಾಡಿದವನೇ. ಸತ್ತಾ ಮಾತ್ರ-ಅವನನ್ನು ಕುರಿತು ಅಸ್ತಿ (-ಇದೆ) ಎಂದು ಹೇಳಬಹುದೇ ಹೊರತು ಹೀಗಿದ್ದಾನೆ-ಹಾಗಿದ್ದಾನೆ ಎಂದು ಹೇಳುವುದಕ್ಕಾಗುವುದಿಲ್ಲವಾಗಿ ಸತ್ತಾ ಮಾತ್ರನಾದವನು ; ಅಂಥವನೇ. ಸಚ್ಚಿತ್ಪ್ರಭಾ—ಸತ್-ಸತ್ಪುರುಷರ ಚಿತ್- ಜ್ಞಾನದಲ್ಲಿ ಪ್ರಕಾಶಿಸುವವನೇ. ಸ್ಥಿರತತ್ವ-ಸ್ಥಿರತತ್ವವಾದವನೇ ; ಎಂದರೆ ಭಗವಂತನನ್ನುಳಿದ ಇತರ ಇಪ್ಪತ್ತೈದು ತತ್ವಗಳೂ ಅಸ್ಥಿರವಾದುವು-ಪರಿ ಣಾಮಹೊಂದತಕ್ಕವು, ಭಗವಂತನು ಮಾತ್ರ ಪರಿಣಾಮಹೊಂದದೆ ಏಕ ರೀತಿಯಾಗಿ ಇರುವವನು, ಆದುದರಿಂದ ಅವನು ಸ್ಥಿರತತ್ವನು ; ಉಳಿದುವು ಅಸ್ಥಿರತತ್ವಗಳು. ವಿಚ್ಚಿದಂಬರರಂಗನಟ ವಿತ್-ತಿಳಿದವರ ಚಿತ್-ಜ್ಞಾನವೆಂಬ ಆಕಾಶರಂಗದಲ್ಲಿ ನಾಟ್ಯವಾಡುವವನೇ ಎಂದರೆ ಅವರ ಹೃದಯಕ್ಕೆ ಮಾತ್ರ ಗೋಚರವಾದವನೇ ಎಂದು ಅರ್ಥ ಜಗದ್ಧರ-ಅಂತರ್ಯಾಮಿಯಾಗಿ ಜಗತ್ತೆಲ್ಲವನ್ನು ಧರಿಸಿರುವವನೇ, ಅಥವಾ ಜಗತ್ತಿನ ಭಾರವನ್ನೆಲ್ಲಾ ವಹಿಸಿಕೊಂಡು ಕಾಪಾಡುವವನೇ. ನಿಗಮಯೋನಿ-ವೇದಗಳಿಗೆ ಕಾರ ಣನಾದವನೇ ಎಂದರೆ ವೇದಗಳನ್ನು ಉಪದೇಶಿಸಿದವನೇ ; ಅಥವಾ ವೇದಗಳಿಂದಲೇ ತಿಳಿಯತಕ್ಕವನೇ. ಭೀಮ-ಆಜ್ಞೋಲಂಘನ ಮಾಡಿದ ಪಾಪಿಗಳಿಗೆ ಅಥವಾ ಶತ್ರುಗಳಿಗೆ ಭಯಂಕರನಾದವನೇ. ಕಾಮದ-ಆಶ್ರಿ ತರ ಇಷ್ಟಾರ್ಥಗಳನ್ನು ಕೊಡತಕ್ಕವನೇ. ಮಾಯಾರಮಾರಾಮ—ಮಾಯೆ ಯೆಂಬ ರಮಾ-ಸ್ತ್ರೀಗೆ ಆರಾಮ-ವಿಹಾರಸ್ಥಾನವಾದವನೇ, ಎಂದರೆ ಜಗ ನ್ಮಾಯೆಯು ಇವನನ್ನು ಆಶ್ರಯಿಸಿಯೇ ಲೋಕವನ್ನೆಲ್ಲಾ ಅಜ್ಞಾನದಲ್ಲಿ ಕುಣಿಸುತ್ತಿರುವಳೆಂದು ಅಭಿಪ್ರಾಯ. ರಾಮನಾಮ-ರಾಮನೆಂಬ ಶ್ರೇಷ್ಠ ವಾದ ಹೆಸರುಳ್ಳವನೇ ; ಎಂದರೆ ಯೋಗಿಗಳು ಯಾವನಲ್ಲಿ ರಮಿಸುವರೋ ಎಂದರೆ ಆನಂದಹೊಂದುವರೋ ಅಂಥವನು "ರಾಮನು" ಎಂಬ ಅರ್ಥ ಬೋಧಕವಾದ ನಾಮಧೇಯವುಳ್ಳವನೇ. ಶರಣಾಗು-ರಕ್ಷಕನಾಗು ; ನಮ್ಮ ನ್ನುರಕ್ಷಿಸು. ವೇದಾಂತವನ್ನು ಓದಿದವರಿಗೆ ಭಗವಂತನಿಗೆ ಕೊಟ್ಟಿರುವ

ಮೇಲಣ ವಿಶೇಷಣಗಳ ಅರ್ಥವು ವಿಸ್ತಾರವಾಗಿ ವಿವರಿಸಿದ ಹೊರತು ಸ್ಪಷ್ಟವಾಗಲಾರದು. ಆದರೂ ಅವುಗಳ ಛಾಯಾರ್ಥವನ್ನು ಮಾತ್ರ ಇಲ್ಲಿ ಸಂಗ್ರಹಿಸಿ ಬರೆದಿರುತ್ತೇನೆ.

೬೭. ಇಲ್ಲಿ ಸರ್ವವ್ಯಾಪಕನಾದ ಭಗವಂತನೇ ನೀನು ಎಂದು ರಾಮನಲ್ಲಿ ಸರ್ವವ್ಯಾಪಕತ್ವಗುಣವನ್ನು ಆರೋಪಿಸಿ ಮುನಿಗಳು ಸ್ತುತಿಸುತ್ತಾರೆ. ಜಲರುಹಭವಾಂಡ–ಬ್ರಹ್ಮಾಂಡ. ವಿಶ್ವತೋಮೂರ್ತಿ–ಎಲ್ಲಾ ಕಡೆಯಲ್ಲಿಯೂ ಸಮಸ್ತವನ್ನು ಆವರಿಸಿಕೊಂಡಿರುವ ಶರೀರವುಳ್ಳವನು. ನಿಶ್ಚಲತತ್ತ್ವ–ಸಮಸ್ತ ತತ್ತ್ವಗಳೂ ಪರಿಣಾಮವನ್ನು ಹೊಂದತಕ್ಕ ತತ್ತ್ವಗಳು, ಭಗವಂತನು ಮಾತ್ರ ಪರಿಣಾಮರಹಿತವಾದ ತತ್ತ್ವವು. ಶ್ರುತಿತತಿಗೆ ನಿಲುಕದ–ವೇದಗಳಿಗೂ ಸಿಕ್ಕದ, ವೇದಗಳೂ ಬಣ್ಣಿಸಲಾರದ. ವಿರಾಡ್ರೂಪನಾದ ನೀನು (ಅಧ್ಯಾಹಾರ) ಓಲಗದ ಮನೆಯೊಳ್ ಸಿಂಹಾಸನದಲ್ಲಿ ಕಿಱಿದಳತೆಗೆ ಅಳವಟ್ಟು–ಸಿಂಹಾಸನಕ್ಕೆ ತಕ್ಕಂತೆ ನಿನ್ನ ಆಕೃತಿಯನ್ನು ಸಣ್ಣದು ಮಾಡಿಕೊಂಡು ಮಂಡಿಸಿದ್ದೈ-ಕುಳಿತಿರುವೆ. "ಅಣೋರಣೀಯನುಂ ಮಹತೋಮಹೀಯನುಂ" ಎಂಬುದು ವೇದ ; ಇದರ ಅರ್ಥ–ಅಣುವಿಗೆ ಅಣುವಾಗಿಯೂ ಎಂದರೆ ಅಣುವಿನೊಳಗೆ ಅದಕ್ಕಿಂತಲೂ ಅಣುವಾಗಿ ಅದರೊಳಗೆ ವ್ಯಾಪಿಸಿಕೊಂಡೂ, ಮಹತ್ತಾದುದಕ್ಕೆ ಮಹತ್ತಾಗಿಯೂ ಎಂದರೆ ಬಹಳ ದೊಡ್ಡ ಪದಾರ್ಥವನ್ನು ಅದಕ್ಕಿಂತಲೂ ದೊಡ್ಡವನಾಗಿ ಅದರ ಸುತ್ತಲೂ ಮೇಲೂ ಕೆಳಗೂ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವವನಾಗಿಯೂ ಇದ್ದಾನೆ ಎಂದರ್ಥ ಉದಗ್ರತೆ-ಸರ್ವಶ್ರೇಷ್ಠತೆ.

೬೮-೬೯ ಈ ಪದ್ಯಗಳಲ್ಲಿ ರಾಮನು ಮಹಾಯೋಗಿಗಳ ಧ್ಯಾನಕ್ಕೂ ಕೂಡ ಅಗೋಚರನಾದ ಸ್ವಾಮಿಯು ಎಂದು ವರ್ಣಿಸಿದೆ.

ಸ್ಥಿರಪದ್ಮಪೀಠಂ-ಪದ್ಮಾಸನವನ್ನು ಹಾಕಿಕೊಂಡು ಸ್ಥಿರವಾಗಿ ಕುಳಿತು, ಋಜು....ತತ್ವಂ–ಋಜೂನ್ಮುಖವಪುವಾಗಿ-ಋಜುವಾಗಿ ಕತ್ತೆತ್ತಿಕೊಂಡೂ, ಸ್ಮೃತಾಕ್ಷರ ತತ್ವನಾಗಿ-ತನ್ನ ಆತ್ಮಸ್ವರೂಪವನ್ನು ನೆನಸಿಕೊಂಡೂ, ಅರ್ಥಿತಮರುದ್ಗತಿ-ಅಪೇಕ್ಷಿಸಲ್ಪಟ್ಟ ವಾಯುವ್ಯಾಪಾರವುಳ್ಳವನು ಎಂದರೆ ಶ್ವಾಸಬಂಧವನ್ನು ಮಾಡಿದವನಾಗಿ, ವಿವರ್ಧಿತಜಠರಪಾವಕಂ-ಅಭಿವೃದ್ಧವಾದ ಜಾಠರಾಗ್ನಿಯುಳ್ಳವನಾಗಿ, ತತ....ಲ್ಲಸಿತನು-ವಿಸ್ತೃತವಾದ ಸುಷುಮ್ನಾನಾಡಿಗಳ ಮಧ್ಯದಲ್ಲಿ ತೇಜೋಮಂಡಲವಾಗಿ ಪ್ರಕಾಶಿಸುವವನಾಗಿ, ಪರಿಚಿತಾ.... ರಮ್ಯಂ–ಸಾಕ್ಷಾತ್ತಾಗಿ ಅನುಭವಮಾಡಿದ ಅಂತರಾತ್ಮನಿಂದ ಮನೋಹರನು ಎಂದರೆ ಆತ್ಮಸಾಕ್ಷಾತ್ಕಾರಮಾಡಿ ಮನೋಹರನೆನಿಸಿಕೊಂಡ, ತಪೋವರನ-

ತಪಸ್ವಿಯು, ಮನೋಗತಿಗೆ ವ್ಯೆಗುಡದೆ-ಸಿಕ್ಕದೆ ಮೀಱಿದಪ್ಪೆ. "ಅತ್ಯತಿಷ್ಠದ್ದ ಶಾಂಗುಲಂ" ಎಂಬುದು ಶ್ರುತಿವಾಕ್ಯ. ಇದರ ತಾತ್ಪರ್ಯ—ಸಮಸ್ತವನ್ನೂ ದಾಟಿರುವವನು ಎಂದು.

೧೯ ಕೆಡೆಯೆ-ನಶಿಸಿಹೋಗುವ ಹಾಗೆ ನಿಖಿಲ..ಳಾಡಿ—ಸಮಸ್ತವಾದ ವೇದಗಳು ಪಾಂಚರಾತ್ರಾದಿ ಆಗಮಶಾಸ್ತ್ರಗಳು ಇವುಗಳ ತಾತ್ಪರ್ಯವನ್ನು ಮನನ ಮಾಡುತ್ತ, ಆತ್ಮಸಂಸ್ಕರಣದಿಂದ ದ್ವೈಹಿಕಗುಣವಿತಾನಮಂ ನೀಗಿ-ಆತ್ಮಕ್ಕೆ ಸಂಸ್ಕಾರಕೊಟ್ಟು ದೇಹಗುಣವಾದ ಆಶಾದಿಗಳನ್ನು ತೊಲಗಿಸಿ, ಚಿತ್ಪದ.. ....ನಿಸಿ-ಬ್ರಹ್ಮನಲ್ಲಿ ಸೇರಿಸಿದ ಮನಸ್ಸುಳ್ಳವರೆನಿಸಿ, ಯೋಗವಿಧಿಯಿಂ ನಡೆದು—ಯೋಗಶಾಸ್ತ್ರದಲ್ಲಿ ಹೇಳಿರುವ ರೀತಿಯಲ್ಲಿ ಆಚರಿಸಿ,....ಬೀಗಿದೆವು-ಪುಷ್ಟಿಮಾಡಿದೆವು. ಆರ್ತರೇ-ಸಮರ್ಥರಾದರೇ ಏನು ?

೨೦ ಅಖಿಳಸಾಧುಗಳು ವಿಷಯುಗಳೆಂಬ ದುರ್ವಿಷಯಗಳೊಳ್-ದುಷ್ಟವಾದ ವ್ಯಾಪಾರಗಳಲ್ಲಿ. ಏಕಾಗ್ರದೆಸಕಮಂತಳೆದು-ಏಕಾಗ್ರಮನಸ್ಕರಾಗಿ, ಇಷ್ಟವಸ್ತುವನ್ನೇ ಧ್ಯಾನಮಾಡುತ್ತ, ರಿಪುವರ್ಗ..ಮಂ-ಅರಿಷಡ್ವರ್ಗವೆಂಬ ಶತ್ರುಗಳ ಸಮೂಹವನ್ನು ದೆಸೆಗೆಡಿಸಿ-ದಿಕ್ಕುಪಾಲುಮಾಡಿಸಿ, ಓಡಿಸಿ. ಸಂಗತ....ರಿಂ-ಸೇರಿಕೊಂಡಿರುವ ಸುಹೃತ್-ಒಳ್ಳೆಯ ಮನಸ್ಸೆಂಬ ಸ್ನೇಹಿತರಿಂದ(ಕೂಡಿ); ಪರಮ..ದಿಂದ-ಪರಮಾತ್ಮಜೀವಾತ್ಮರುಗಳ ಸಮಭಾವದಿಂದ (ಕೂಡಿ), ಪರಮಾತ್ಮನ ಅವಸ್ಥಾಭೇದವೇ ಜೀವಾತ್ಮನೆಂದು ತಿಳಿದು ; ಪೊಸ..ರಾಜ್ಯಮನೆ-ಹೊಸತಾದ ರಾಜಯೋಗವೆಂಬ ಘನವಾಗಿ ಪ್ರಾಪ್ತವಾದ ರಾಜ್ಯವನ್ನು ಸಾಧಿಸವೇಟ್ಟುದು-ಸಾಧಿಸಬೇಕು ಎಂದು-ಈ ರೀತಿಯಲ್ಲಿ ಸಾಂಖ್ಯತತ್ವಮಂ-ಸಾಂಖ್ಯಶಾಸ್ತ್ರದ ತಿರುಳನ್ನು ಮುನೀಂದ್ರನಾಗಿ-ಕಪಿಲ ಋಷಿಯಾಗಿ, ತಾಯ್ಗೆ ದೇವಹೂತಿಗೆ ಬೋಧಿಸುವ ನೆವದಿಂದ ಅಱಿಪಿದ್ದೆ, ಲೋಕಕ್ಕೆಲ್ಲಾ ಬಹಿರಂಗಪಡಿಸಿದೆ. ಈ ಪದ್ಯದಲ್ಲಿ ರಾಜಯೋಗದ ಸಾಧನೆಯನ್ನು ಒಂದು ಹೊಸರಾಜ್ಯದ ಸಂಪಾದನೆಯಂತೆಯೂ, ಸಾಂಖ್ಯಶಾಸ್ತ್ರಪ್ರವರ್ತಕನಾದ ಕಪಿಲಋಷಿಯೇ ರಾಮನೆಂದೂ ನಿರೂಪಿಸಿದೆ.

೨೧ ಘನ ಪುಷ್ಕಲಾವರ್ತಕಗಳೆಂಬ ಪ್ರಳಯಕಾಲದ ಮೇಘಗಳು ತುಂಬಿ-ನೀರನ್ನು ತುಂಬಿಕೊಂಡು, ತೂಳ್ದು-ಪ್ರಸರಿಸಿ, ಅಳುಂಬಂ-ಅತ್ಯಧಿಕವಾಗಿ (ಅವ್ಯಯ), ಒಳರೆ-ಘರ್ಜಿಸಲು ; ಅಂಭಃ....ರವಂ-ಅಂಭಃಪ್ರಣಿಧಿಗಳ (ಮೇಘಗಳ) ನಿಚಯ-ಸಮೂಹಗಳ, ಸಂಗಮ-ಸೇರುವಿಕೆಯಿಂದ ಉಂಟಾದ ಕೋಟಿ ದಂಭೋಳಿ-ಅನೇಕ ಸಹಸ್ರ ಸಿಡಿಲುಗಳ ಘೋಷ-ಘರ್ಜನೆಯೆಂಬ ಭೀಷಣರವಂ-

ಭಯಂಕರವಾದ ಶಬ್ದವು ಕೂಡೆ ; ಸಂವರ್ತ..ನಾದ–ಪ್ರಳಯಕಾಲದ ಬಿರು ಗಾಳಿಯ ಗಂಭೀರನಾದವು, ಕೆತ್ತೆ-ನಡುಗಿಸಲು ; ಕಮಠ ದಿಕ್ಕುಂಭಿ ಕುಂಭೀನಸರ್-ಆದಿಕೂರ್ಮನು, ದಿಗ್ಗಜಗಳು, ಮಹಾ ಶೇಷನು-ಇವರುಗಳು ಎತ್ತ ದೆಸೆ-ಯಾವ ಕಡೆಗೆ ಓಡಿ (ಹೋದರು) ಪೇಳು ಎನೆ, ಕಲ್ಪಾಂಭೋಧಿಯೊಳ್ ಝುಷಾಕೃತಿಯೊಳ್ ಮತ್ಸ್ಯಾಕೃತಿಯಲ್ಲಿ ವೇದಮಂ-ನಾಲ್ಕುವೇದಗಳನ್ನು, ಎಲ್ಕೆ ವೇದವೇದ್ಯ-ವೇದಪ್ರತಿಪಾದ್ಯನಾದ ಸ್ವಾಮಿಯೇ, ಎತ್ತಿದೈ. ಇಲ್ಲಿ ಪೂರ್ವಕಥೆಯೇನು ? " ದಿಕ್ಕುಂಭಿ ಕುಂಭೀನಸರ್ " ಎಂದು ತಿದ್ದಬೇಕು.

೭೨-೭೩ ವಿಲಯ..ನಿಶ್ಚಲಗೆ–ಪ್ರಳಯದಲ್ಲಿ ವಟಪತ್ರದಲ್ಲಿ ಬಾಲಕನಾಗಿ ಮಲಗಿದ್ದ ನಿಶ್ಚಲನಾದ ನಿನಗೆ. ಅಬ್ಧಿನಿಲಯ- ಕ್ಷೀರಸಮುದ್ರದಲ್ಲಿ ಮನೆಮಾಡಿಕೊಂಡು ವಾಸಮಾಡುವವನು. ವಿಶ್ವಂಭರಗೆ-ಜಗತ್ತನ್ನೆಲ್ಲಾ ಹೊತ್ತಿರುವ ನಿನಗೆ. ಗಿರಿಗರಿಷ್ಠ-ಪರ್ವತ ಶ್ರೇಷ್ಠ. ಹೇಮಾಕ್ಷ-ಹಿರಣ್ಯಾಕ್ಷನು.

೭೪ ಪೆಳರ್ದದಿರೆ-ಹೆದರಿ ನಡುಗಲು. ಪೂಣ್ದು-ಸಂಕಲ್ಪ ಮಾಡಿದ. ವಿಲಯಾಂತ ಭೈರವ-ಪ್ರಯಳಕಾಲದ ಮಹಾರುದ್ರ. ವೆಗ್ಗಳಿಸಿ-ಅಗುರ್ವಿಸಿ, ವಿಜೃಂಭಿಸಿ, ರೇಗಿ. ಮಾಕಂಭ-ತ್ಸ.ಮಹಾಸ್ತಂಭ; ಮಹತ್ ಎಂಬುದಕ್ಕೆ ಕರ್ಮಧಾರಯದಲ್ಲಿ ಮಾ ಎಂದು ಆದೇಶವಾಗುತ್ತದೆ.

೭೫ ಪುಂಡ್ರತ್ರಯ-ಮೂರು ನಾಮ. ನೀವೀತ-ಕತ್ತಿನಮೇಲೆ ಧರಿಸಿರುವ ಧೋತ್ರ. ಮೇಲ್ವಾಯ್ದ-ಮೇಲೆ ಹಾಯ್ದ, ಅತಿಶಯವಾದ.

೭೬ ಬಹುಶತಕಬಾಹುರಾಜಿ-ಕಾರ್ತ್ತವೀರ್ಯನಿಗೆ ಸಹಸ್ರಬಾಹುಗಳಿದ್ದುವು ; ಅವುಗಳ ಸಾಲಿನಿಂದ ವಿಚಿತ್ರ ರೂಪನಾದವನು. ಆಹವ-ಯುದ್ಧ. ಅನ್ವಯ-ವಂಶ. ಭವನಂ-ಮಗನು.

೭೭ ಹದನು-ರೀತಿಯು. ಉಗ್ರ..ರ್ಚರ್-ಭಯಂಕರವಾದ ಪ್ರಳಯಕಾಲದ ಉತ್ಪಾತಗಳನ್ನು ಹುಟ್ಟಿಸಲು. ವೃಕ-ಭಸ್ಮಾಸುರನಿಗೆ ವೃಕಾಸುರನೆಂಬ ಹೆಸರೂ ಉಂಟು.

೭೮ ಯೋನಿಜ ಯೋನಿಯಲ್ಲಿ ಹುಟ್ಟುವ ಪ್ರಾಣಿಗಳು ; ಸೃಷ್ಟಿಗಳಲ್ಲಿರುವ ಉಳಿದುವುಗಳು ಯೋನಿಸ್ಪೃಷ್ಟವಲ್ಲ, ಮಾಯಾಬೀಜದೋಜೆಯಿಂ-ಮಾಯೆಯೆಂಬ ಕಾರಣವನ್ನು ಆಶ್ರಯಿಸಿ, ತತ್ಸಾಮರ್ಥ್ಯದಿಂದ ಕರ್ಮಪಾಶದಿಂ ಬಂದಿಸಿ ಸೃಜಿಸಿ-ಪೂರ್ವ ಜನ್ಮಗಳಲ್ಲಿ ಮಾಡಿದ ಕರ್ಮಕ್ಕನುಸಾರವಾಗಿ ಶರೀರಗಳನ್ನು ಸೃಷ್ಟಿಸಿ, ಹರಿರೂಪಿನಿಂದ ಪೊರೆದು-ಬ್ರಹ್ಮರೂಪಿಯಾಗಿ ಸೃಷ್ಟಿಸಿದ ಜಗತ್ತನ್ನು ವಿಷ್ಣುರೂಪಿಯಾಗಿ-ಕಾಪಾಡಿ. ಚತು....ರುದ್ರ–ನಾಲ್ಕುಮುಖ,

ದೀರ್ಘದೇಹ, ಹತ್ತುತೋಳು ಇವುಗಳಿಂದ ಲಸಿತ-ಪ್ರಕಾಶ ಮಾನನಾದ ಪ್ರಳಯಕಾಲದ ಅಗ್ನಿಸ್ವರೂಪದಲ್ಲಿ ರುದ್ರಾವತಾರವನ್ನು ಮಾಡಿ ದಹಿಪ-ಸುಡುವ, ಎಂದರೆ ತ್ರಿಮೂರ್ತಿಗಳ ಅವತಾರವನ್ನು ಮಾಡಿ ಜಗತ್ಸೃಷ್ಟಿಸ್ಥಿತಿಸಂಹಾರಗಳನ್ನು ಮಾಡುವವನೇ ನೀನು ಎಂದು ಋಷಿಗಳು ರಾಮನನ್ನು ಸ್ತುತಿಸುತ್ತಾರೆ.

೭೯-೮೦ ವಿಧುವಿಭಾಕರರ್–ಚಂದ್ರಸೂರ್ಯರು. ಪೊದಬ್ದು-ವ್ಯಾಪಿಸಲ್ಪಟ್ಟು. ಅಳ್ಳಾಕುಡುಗುಂ.–ಸಂಪೂರ್ಣವಾಗಿ ಲಯಹೊಂದುತ್ತದೆ. ಅರೆಯಟ್ಟುವ–ಒಣಗಿಸಿಬಿಡುವ. ನೆರಂಬಾರರ್–ನೆರಮಂ-ಸಹಾಯವನ್ನು ಪಾರರ್- ನಿರೀಕ್ಷಿಸಲು, ಕೋರಲು. ವಾರ-ಸಮೂಹ

೮೧ ಈ ಪದ್ಯವು ಯಮಕಾಲಂಕಾರಕ್ಕೆ ಒಳ್ಳೆಯ ಉದಾಹರಣೆಯಾಗಿದೆ.

ಅತುಲ ಜಾತಾನಂದ ಮೂರ್ತಿ–ಅತುಲ-ಅಸದೃಶರಾದ, ಅನುಜಾತ-ತಮ್ಮಂದಿರುಗಳ, ಆನಂದಮೂರ್ತಿ–ಆನಂದವೇ ಮೂರ್ತೀಕರಿಸಿದಂತಿರುವ, ಎಂದರೆ ಆನಂದಸ್ವರೂಪನಾದವನೇ, ಜಯ-ಸರ್ವೋತ್ಕೃಷ್ಟನಾಗು. ಪಾರಿಜಾತ ನಂದನರುಚಿರವಂದ್ಯ–ಪಾರಿಜಾತ ವೃಕ್ಷಗಳಿಂದ ಕೂಡಿದ ನಂದನವನದಲ್ಲಿ ಆಸಕ್ತಿಯುಳ್ಳ ಇಂದ್ರನಿಂದ ಸ್ತುತಿಸಲ್ಪಡತಕ್ಕವನೇ, ಜಯಜಯ. ಮಹಾಘಾಗೌಘಭೇದನಾಶ–(ಆಶ್ರಿತರ) ಮಹತ್-ಅಧಿಕವಾದ ಅಘ-ಪಾಪಗಳೆಂಬ ಅಗ-ಬೆಟ್ಟಗಳ ಓಘ-ಸಮೂಹದ ಭೇದನದಲ್ಲಿ ಆಶಾ-ಆಸಕ್ತಿಯು ಯಾವನಿಗೋ ಅಂಥವನೇ; ನಿರಾಮಯ-ಪಾಪದೂರನೇ, ದೃಢಕಾಯನೇ; ಮಹಾದಿದೇವಾಂಚಿತ-ಶ್ರೇಷ್ಠನಾದ ಆದಿದೇವ-ಈಶ್ವರನಿಂದ ಅಂಚಿತ ಪೂಜಿಸ್ವಲ್ಪಟ್ಟವನೇ, ಜಯಜಯ ಎಂದು ಪೂರ್ವಾರ್ಧಕ್ಕೆ ಅರ್ಥ.

ಅತುಲ....ಮೂರ್ತಿ–ಅತುಲ-ಅಸದೃಶವಾಗಿ, ಅನು-ಅನುಸರಿಸಿ, ಜಾತ-ಉಂಟಾದ, ಆನಂದ-ಸಂತೋಷದ, ಮೂರ್ತಿ-ಶರೀರವುಳ್ಳಂಥ ಎಂದರೆ ಸದಾ ಸಂತುಷ್ಟನಾದವನೇ ಸದಾನಂದನೇ, ಜಯಜಯ. ಜಯಜಯ ಪಾರಿಜಾತ ಎಂಬುದಕ್ಕೆ ಜಯಜಯ+ಅಪಾರಿಜಾತಾ....ಎಂದು ಪದವಿಭಾಗಮಾಡಿ, ಅಪಾರಿಜಾತನಂದನರುಚಿರವಂದ್ಯ ಎಂಬುದಕ್ಕೆ ಅಪಾರಿಜಾತ–ಅಪ-ಹೋಗಿರುವ ಅರಿ-ಶತ್ರುಗಳ ಜಾತ-ಸಮೂಹವುಳ್ಳಂಥ ಮತ್ತು ನಂದನರುಚಿರ-ನಂದನರಲ್ಲಿ-ಮಕ್ಕಳಲ್ಲಿ ರುಚಿರ-ಅಭಿಪ್ರಾಯ (ಪ್ರೀತಿ) ವುಳ್ಳಂಥ ಮತ್ತು ಅವರಿಂದ ಸ್ತುತಿಸಲ್ಪಟ್ಟ ; ಇಂಥವನೇ ಜಯಜಯ ಎಂದರ್ಥವನ್ನು ಮಾಡಬಹುದು.

೮೨ ಅಳರ್ದು-ಧಾ-ಅಳರ್-ಭಯೇ. ಒಳರ್ದು-ಕೂಗಿಕೊಂಡು, ಧಾ. ಒಳಱು-ರಾವೇ; ಹೀಗೆ ಱ ಕಾರಾಂತ ಧಾತುವನ್ನು ರೇಫಾಂತವಾಗಿ ಮಾಡಿ ಕ್ರಿಯಾ

ರೂಪಗಳನ್ನು ಮಾಡುವ ರೂಢಿಯು ೧೭ನೆಯ ಶತಮಾನದಿಂದ ಬಂದಿದೆ; ಪ್ರ. ತೋಱಿದ, ತೋರ್ದ; ಒಳಱಿ, ಬಳರ್ದು ಇತ್ಯಾದಿ. ಬಾಗುಳ್-ತ್ಸ. ವ್ಯಾಕುಲ, ಚಿಂತೆ. ಪೊದಟ್ಟು-ಪೊರ್ದುಗೆಯಾಗಿ, ನಮಸ್ಕರಿಸಿ.

೮೩ ಬೆದೆ-ತ್ಸ.ವ್ಯಥೆ. ಬಂದಣ–ತ್ವ.ಬಂಧನ. ಉಪಹತಿ-ಪೆಟ್ಟು, ಹಿಂಸೆ. ಕೃತಾರ್ಥರೆವು-ಕೃತಾರ್ಥರಾಗಿ ಆದೆವು ;-ಈ ರೀತಿಯಲ್ಲಿ ನಾಮಪದಗಳ ಮೇಲೆ ಆಖ್ಯಾತಪ್ರತ್ಯಯಗಳನ್ನು ಸೇರಿಸಿ ಹೊಸ ಧಾತುಗಳನ್ನು ಮಾಡುವುದುಂಟು. ಉ. "ಕೇಶವನೆಂ" ಕೃತಜ್ಞರೆವು (೮೪) ಧನ್ಯರೆವು (೮೫) ಇತ್ಯಾದಿ.

೮೪ ಧರಾಮರಜನಂ-ಬ್ರಾಹ್ಮಣರು. ಓಗರ-ಅನ್ನ ಒಗರುಗೊಂಡುದು-ಉಪ್ಪಾಯಿತು, ಎಂದರೆ "ಪಿಂಡ ಪೆರಂಗಾಯವಾಯಿತೆ" ನ್ನುವ ಹಾಗೆ ಹುಡುಕಿಕೊಂಡು ಹೋಗುವ ಪದಾರ್ಥವಾಯಿತು; ಅಥವಾ ಸಿಕ್ಕದೆ ಇರಲಾಗಿ ಉಪ್ಪಾಗಿ ಹೋಯಿತು ಎಂದರ್ಥ. ಅಳ್ದ ಚಿಂತೆ=ಅಳ್ದುದು+ಚಿಂತೆ, ನಮ್ಮನ್ನು ಆಳಿದ ಚಿಂತೆ. ನಿರ್ಜರತೆ-ನಿರ್ಜರರು ಜರಾರಹಿತರು ಎಂದು ಹೇಳಿಸಿಕೊಳ್ಳುವಿಕೆಯ ಭಾವ. ಸೆಱೆ..ದೆವ-ಸೂರ್ಯ ಚಂದ್ರರನ್ನು ಕೂಡ ಕಾಣದಂತೆ ನೆಲಮಾಳಿಗೆಯಲ್ಲಿ ಸೆರೆಯಿಡಲ್ಪಟ್ಟವರಾದುದರಿಂದ ಸೂರ್ಯಚಂದ್ರರನ್ನು ಗುರುತು ಹಿಡಿಯಲಾರದವರಾದರು.

೮೫ ಪಡಲಿಟ್ಟ–ಬಿದ್ದ. ಅಮರ್ದು–ತ್ಸ. ಅಮೃತ. ಸುರಭಿ-ಕಾಮಧೇನು. ತಣ್ಗೂಟ್=ತಣ್ಣಿತು+ಕೂಟ್ (ಅನ್ನ,) ಹೊಸಕನ್ನಡ ತಂಗಳು. ಸಾಕು+ಅದು+ಈ.

೮೬ ಎಣೆಯರ್–ಜತೆಗಾರರು. ದೆಸೆದೆಸೆಯಂ ಅಂಡಲೆದು–ದಿಕ್ಕುದಿಕ್ಕುಗಳಲ್ಲಿ ಹಿಂಸೆಯನ್ನು ಹೊಂದಿ. ಉಂಡುಂಡು-ಅನುಭವಿಸಿ, ಕಂಡೂ, ಕೇಳಿಯೂ.

೮೭ ಪರಿಲಸಿತಮಾಯ್ತು-ಪ್ರಕಾಶಿತವಾಯಿತು, ಪ್ರಾರಂಭವಾಯಿತು.

೮೮-೯೨ ರಾವಣನ ಮನೆಯಲ್ಲಿ ಬ್ರಹ್ಮ, ಶಿವ, ಬೃಹಸ್ಪತಿ, ಚಂದ್ರ, ಸೂರ್ಯ ಮೊದಲಾದವರು ಕೆಲಸ ಮಾಡುತ್ತಿದ್ದರೆಂದು ವರ್ಣಿಸಿ ಇದೆ; ಬ್ರಹ್ಮನ ಕೆಲಸ ಪಂಚಾಂಗ ಶ್ರವಣಮಾಡಿಸುವುದು. ಮುತ್ತಯ್ಯಂ–ಬ್ರಹ್ಮ; ಬ್ರಹ್ಮನ ಮಗ ಪುಲಸ್ತ್ಯ, ಅವನ ಮಗ ರಾವಣ. ಬಹುರೂಪಭೃತ್ವಮಂ–"ಬಹುಧಾ ವಿಜಾಯತೇ" ಎಂಬ ಶ್ರುತಿಯಲ್ಲಿ ಹೇಳಿರುವಂತೆ ಅನೇಕ ರೂಪವಾದ ಅವತಾರಗಳ ಮಾಡುವಿಕೆಯನ್ನು. ಅಂಡಲಿಗೆ-ತೊಂದರೆಗೆ; ಇಲ್ಲಿ ಪುನಃ ಪುನಃ ಕೇಳಿದ್ದರಿಂದ ಉಂಟಾದ ತೊಂದರೆಗೆ. ಅರುಣಜಂ–ಸೂರ್ಯಪುತ್ರನಾದ ಸುಗ್ರೀವ. ದಶಶಿರನಂ ಪರಿಭವಿಸಲಾರ್ಗೆ ಗೋಚರಂ ಎಂದನ್ವಯ. ಅನುವು-ಅನುಕೂಲವು. ಓವಿತು-ರಕ್ಷಿಸಿತು.

೯೩ ಕತ-ಕಾರಣ. ತುರಗವಾಹಂ—ಇಂದ್ರ; ಹೇಗೆ? ಎಮ್ಮನ್ವಯದ ಪಿರಿಯ ಖಗಂ-ಸೂರ್ಯನ ಹಿರಿಯಮಗನಾದ, ಜಗುನೆಯಣ್ಣಂ-ಯಮುನೆಯ ಅಣ್ಣನಾದ ಯಮನು. ನೆರೆವೊಟಲರ್-ನೆರೆವೂರಿನವರು, ಸಹಾಯಕರು.

೯೪-೯೫ ಸಾಮಂತ ಸಂದೋಹ-ಅಧೀನ ರಾಜರ ಸಮೂಹ. ದಿಶಾಂತವಿಶ್ರಾಂತ-ದಿಕ್ಕುಗಳ ಕೊನೆಯಲ್ಲಿ ನಿಂತ ಎಂದರೆ ಸರ್ವತ್ರವ್ಯಾಪಿಸಿದ. ಆಮ್ನಾಯ—ವೇದ. ಸಾಮಸಂಗ್ರಾಮ—ಸಾಮ ಮೊದಲಾದ ಚತುರೋಪಾಯಗಳ ಗುಂಪು. ಆಯಂ-ಲಾಭ, ಮೇಲ್ಮೆ. ಶಕ್ತಿತ್ರಯಂ- ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹ ಶಕ್ತಿ. ಸಮವಾಯಲಕ್ಷಣಮಾಗೆ-(ತರ್ಕಶಾಸ್ತ್ರದಲ್ಲಿ ಹೇಳಿರುವ ಸಮವಾಯ ಸಂಬಂಧದಂತೆ) ಎಡಬಿಡದೆ ಸೇರಿಕೊಂಡಿರಲು.

೯೬ ನಿಱಿಗೆ-ಇರಿಸುವಿಕೆ, ವಿನ್ಯಾಸ. ಸೆಡೆದ—ನವರಸಕ್ಕೂ ಭಕ್ತಿರಸಕ್ಕೂ ಸೇರುವೆ ಇಲ್ಲವಾಗಿ, ಸೆಡೆದ, (ಹಿಂದೆ ನಿಂತ) ಎಂಬ ವಿಶೇಷಣವನ್ನು ಹಾಕಿದೆ.

೯೭ ಭೃಗೂದ್ವಹಂ-ಭೃಗುವಿನ ವಂಶವನ್ನು ಉದ್ಧಾರಮಾಡಿದವನು ಪರಶುರಾಮನು. ಏಡೆಡೆಯಂ-ಏಳು ಸ್ಥಳವನ್ನು; ಪೂರ್ವಕಥೆ ಏನು? ಸ್ಯೈಪು-ಪುಣ್ಯ.

## ವೃತ್ತಲಕ್ಷಣಗಳು.

ಈ ಗ್ರಂಥವು ವಾರ್ಧಿಕ ಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ಮೊದಲು ಷಟ್ಪದಿಗಳ ಸಾಮಾನ್ಯ ಲಕ್ಷಣವನ್ನು ಹೇಳಿ, ಅನಂತರ ಈ ಷಟ್ಪದಿಗೆ ಲಕ್ಷ್ಯಲಕ್ಷಣ ಸಮನ್ವಯ ಮಾಡಿ ತೋರಿಸುತ್ತೇನೆ.

ಷಟ್ಪದಿಗಳಲ್ಲಿ ಆರು ಪಾದಗಳಿವೆ. ಮೊದಲು ಮೂರು ಪಾದಗಳೂ ಎರಡನೆಯ ಮೂರು ಪಾದಗಳೂ ಒಂದೇ ಲಕ್ಷಣವಾಗಿ ಇರುವುವು; ಎಂದರೆ ೧, ೨, ೪, ೫ ಪಾದಗಳು ಒಂದೇ ಮಾತ್ರಾ ಸಂಖ್ಯೆಯುಳ್ಳವಾಗಿಯೂ, ೩, ೬ ಪಾದಗಳು ಒಂದೇ ಮಾತ್ರಾ ಸಂಖ್ಯೆಯುಳ್ಳವಾಗಿಯೂ ಇವೆ. ಹೇಗೆಂದರೆ—೧ ನೆಯ ಪಾದದಲ್ಲಿ ೮, ೧೦, ೧೨, ೧೪, ೧೬, ೨೦ ಮಾತ್ರೆಗಳಿದ್ದರೆ, ೨, ೪, ೫, ರಲ್ಲಿ ೮, ೧೦, ೧೨, ೧೪, ೧೬, ೨೦ ಮಾತ್ರೆಗಳು ಕ್ರಮವಾಗಿ ಇರುವುವು. ೩ ಅಥವಾ ೬ ನೆಯ ಪಾದದಲ್ಲಿ ೧ ನೆಯ ಪಾದದ ಒಂದೂವರೆಯಷ್ಟು ಮಾತ್ರೆಗಳೂ ಮತ್ತು ಪಾದಾಂತದಲ್ಲಿ ಒಂದು ಗುರುವೂ ಬರುವುವು. ಒಂದನೆಯ ಪಾದದಲ್ಲಿ ೮ ಮಾತ್ರೆಗಳಿದ್ದರೆ ೩ ನೆಯ ಪಾದದಲ್ಲಿ ೮ + ೮/೨ + ೨ = ೧೪ ಮಾತ್ರೆಗಳೂ, ೧೦ ಇದ್ದರೆ ೧೦ + ೧೦/೨ + ೨ = ೧೭ ಮಾತ್ರೆಗಳೂ, ೨೦ ಇದ್ದರೆ ೨೦ + ೨೦/೨ + ೨ = ೩೨ ಮಾತ್ರೆಗಳು ಇವೆ.

ಷಟ್ಪದಿಗಳಲ್ಲಿ ೬ ಭೇದಗಳುಂಟು. ಅವುಗಳ ಹೆಸರು-ಶರಷಟ್ಪದಿ, ಕುಸುಮ ಷಟ್ಪದಿ, ಭೋಗಷಟ್ಪದಿ, ಭಾಮಿನಿಷಟ್ಪದಿ, ಪರಿವರ್ಧಿನಿಷಟ್ಪದಿ, ವಾರ್ಧಿಕಷಟ್ಪದಿ. ಇವುಗಳಿಗೆ ಒಟ್ಟುಲಕ್ಷಣ–

ಶರ-ಕುಸುಮ-ಭೋಗ-ಭಾಮಿನಿ ।
ಪರಿವರ್ಧಿನಿ-ವಾರ್ಧಿಕಂಗಳೆಂದಾಱು ತೆಱಂ ॥
ಕರಿ-ದಶ-ರವಿ-ಮನು ರಾಜರ್ ।
ಬರೆ ವಿಂಶತಿಮಾತ್ರೆಯಿಂದೆ ಷಟ್ಪದಿ ನಡೆಗುಂ ॥

ಟೀಕು–ಷಟ್ಪದಿಗಳಲ್ಲಿ ೧ ನೆಯ ಪಾದದಲ್ಲಿ ಕರಿ=೮, ದಶ=೧೦, ರವಿ=೧೨, ಮನು=೧೪, ರಾಜ=೧೬, ವಿಂಶತಿ=೨೦ ಮಾತ್ರೆಗಳಿದ್ದರೆ ಕ್ರಮವಾಗಿ ಶರ, ಕುಸುಮ, ಭೋಗ. ಭಾಮಿನಿ, ಪರಿವರ್ಧಿನಿ, ವಾರ್ಧಿಕವೆಂದು ಹೇಳಲ್ಪಡುತ್ತದೆ.

ಈ ಲಕ್ಷಣದ ಪ್ರಕಾರ ಈ ಗ್ರಂಥವು ಬರೆಯಲ್ಪಟ್ಟಿರುವ ವಾರ್ಧಿಕಷಟ್ಪದಿಗೆ ೧, ೨, ೪, ೫ ಪಾದಗಳಲ್ಲಿ ೨೦ ಮಾತ್ರೆಗಳೂ, ೩, ೬ ರಲ್ಲಿ ೩೨ ಮಾತ್ರೆಗಳೂ ಇರಬೇಕು.

ಉದಾಹರಣೆಗಾಗಿ-ಈ ಗ್ರಂಥದ ನಾಲ್ಕನೆಯ ಸಂಧಿಯ ೪೬ ನೆಯ ಪದ್ಯಕ್ಕೆ ಮಾತ್ರ ಗುರುಲಘು ವಿನ್ಯಾಸದಿಂದ ಪ್ರಸ್ತಾರ ಹಾಕುತ್ತೇನೆ.

ᴗ । । । ᴗ । । । ᴗ ᴗ । ᴗ । ᴗ =20
ಪುಟ್ಟಿ ಬಸಿಱೊಳ್ಪಿರಿಯನಾದಬ್ಬೆಗುಂಡು ಬಾ ।

ᴗ । ᴗ । । । । । ᴗ ᴗ । ᴗ । । । =20
ಯ್ಗೊಟ್ಟವಂ ಸವಿದ ಮೊಲೆಯಂ ಪಟ್ಟುವೋಣವನ ।

ᴗ । । । । । । ᴗ । । । । । ᴗ । । । । । ᴗ । ᴗ । । । ᴗ =32
ತೊಟ್ಟಿಲೊಳೆ ಪರಿದವಂ ನಡೆದೆಡೆಯೊಳಾಡಿ ಬಳೆದವನಂತೆ ಮಾತುಗಲಿತು ॥

ᴗ । ᴗ ᴗ । ᴗ । । । । । ᴗ ᴗ । =20
ಒಟ್ಟಿನಿಂ ಬಿಜ್ಜೆಬಿನ್ನಣವಱಿತು ತನ್ನಣ್ಣ ।

ᴗ । । । । । । । । ᴗ । ᴗ ᴗ । ᴗ =20
ಗಟ್ಟುಳಿಯನೆಸಗುವನೆ ಸೋದರಂ ತಪ್ಪುಮುಂ ।

ᴗ ᴗ । ᴗ । ᴗ । । । ᴗ । । । । । । । ᴗ । ᴗ । । । ᴗ =32
ಬಟ್ಟೊವರ್ಗೆಯ್ದೊಡಂ ಮಱೆದು ಕಾಣ್ಬನೆಪಿರಿಯನೆಳೆಯೊಳ್ನೆಗಪ್ತವಡೆದು ॥

ಮಾತ್ರೆಗಳ ಲೆಕ್ಕದ ಪ್ರಕಾರ ಗಣವಿಭಾಗವನ್ನು ಮಾಡಿ ಷಟ್ಪದಿಗಳಿಗೆ ಲಕ್ಷಣಗಳನ್ನು ಹೇಳುವುದೂ ಉಂಟು. ಪ್ರಕೃತದಲ್ಲಿ ಈ ಷಟ್ಪದಿಗೆ ಮಾತ್ರ ಆ ಕ್ರಮದಲ್ಲಿ ಲಕ್ಷಣವನ್ನು ಹೇಳುತ್ತೇನೆ. ಈ ಷಟ್ಪದಿಯಲ್ಲಿ ೫ ಮಾತ್ರೆಗಳುಳ್ಳ ೪ ಗಣವು ೧, ೨, ೪, ೫, ನೆಯ ಪಾದಗಳಲ್ಲಿಯೂ ೫ ಮಾತ್ರೆಗಳುಳ್ಳ ೬ ಗಣಗಳೂ ಒಂದು ಗುರುವೂ ೩, ೬ ರಲ್ಲಿಯೂ ಬರುವುವು.